# 6

# ಚುನಾವಣೆ

## ಅರ್ಥಾತ್

# ಬನಾವಣೆ


ಪ್ರಹಸನ ರಚಯಿತರು:

ಕುಡ್ಪಿ ವಾಸುದೇವ ಶೆಣೈ

ಮಂಗಳೂರು.


**1954.**




ಒಂದಾಣ್ ಮಾಲ

office copy.
Please return it.

# 'ಚುನಾವಣೆ' ಅರ್ಥಾತ್ 'ಬನಾವಣೆ'

[**ಪಾತ್ರವಿವರ:** ಬಿಳಿಬೈಲು ಭುಜಂಗರಾಯರು—ಚುನಾವಣಾ ಹುರಿಯಾಳು; ರಾಮುಪ್ಪಯ್ಯ ಮತ್ತು ವಿಠ್ಠಲಪಂತ—ಭುಜಂಗರಾಯರ ಚುನಾವಣಾ ಕೆಲಸಗಾರರು; ಲಕ್ಷ್ಮಿ—ಭುಜಂಗರಾಯರ ಹೆಂಡತಿ; ಚಂದರ್—ಇನ್ನೊಬ್ಬ ಹುರಿಯಾಳು; ಗೇಂದು, ಗೋಪು—ಚಂದರನ ಸಹಾಯಕರು; ಮೀನಾಕ್ಷಮ್ಮ—ಶ್ರೀಮಂತ ವಿಧವೆ, ಚುನಾವಣಾ ಹುರಿಯಾಳು; ಪಂಜಿಬೈಲ್ ಶಂಕ್ರಯ್ಯ—ಸ್ವತಂತ್ರ ಉಮೇದ್ವಾರ; ಗೋವಿಂದರಾವ ಸಖಾರಾಮ—ಭಾಷಣ ತರ್ಜುಮೆ ಮಾಡುವವರು.]

## ದೃಶ್ಯ ೧.

[ಭುಜಂಗರಾಯರ ಮನೆಯ ಕೊಠಡಿ. ಭುಜಂಗರಾಯರು, ರಾಮುಪ್ಪಯ್ಯ ಮತ್ತು ವಿಠ್ಠಲಪಂತರೊಡನೆ ಶೀವಿಯಿಂದ ಪ್ರವೇಶಿಸುವರು; ಕಂಕುಳಲ್ಲಿ ಕೆಳ್ಳಗಿನ ಚರ್ಮದ ಚೀಲ.]

ಭುಜಂಗ: (ಫಕ್ಕನೆ ಹಿಂದಿರುಗಿ) ರಾಮುಪ್ಪಯ್ಯ!

ರಾಮುಪ್ಪಯ್ಯ: (ವಿನಮ್ರವಾಗಿ) ಸ್ವಾಮಿ!

ಭುಜಂಗ: ಬೇಡ–ನನ್ನನ್ನು ಹಸಿ ಹಸಿ ಹೊಳಬೇಡಿ ಅಂತ ಸಾರಿ ಸಾರಿ ಹೇಳುತ್ತೇನೆ!

ರಾಮುಪ್ಪಯ್ಯ: ಎಲ್ಲಾದರೂ ಉಂಟೇ?

ಭುಜಂಗ: ನೋಡಿ ರಾಮುಪ್ಪಯ್ಯ—ನಾನು ಅಸ್ವಸ್ಥದ ಮನುಷ್ಯ—ನನಗೆ ಕರಕರೆ ಆಗೋದಿಲ್ಲ—ನಾನು ಚುನಾವಣೆಗೆ ನಿಲ್ಲೋದಿಲ್ಲ—ನನಗೆ ಸತ್ತಾಯ ಬೇಡ—ಮತ್ತೆ ನಿಮ್ಮ ಖುಶಿ!

ರಾಮುಪ್ಪಯ್ಯ: ಅದು ನಮ್ಮ ಖುಶಿಯಲ್ಲ ಸ್ವಾಮಿ, ಮಹಾಜನರ ಅಪೇಕ್ಷೆ–ಅಲ್ಲವೇ ಪಂತರೇ?

ವಿಠ್ಠಲಪಂತ: ಊರಿಗೆ ಊರೇ ಘೋಷಿಸುತ್ತಿದೆ ಸ್ವಾಮಿ,—ತಮ್ಮಂಥ ಯೋಗ್ಯರು ನಿಂತರೆ ಮಾತ್ರ ಓಟು ಕೊಡುತ್ತೇವೆ—ಎಂದು! ಎಲ್ಲಿಗೆ ಹೋದರೂ 'ನಮ್ಮ ಮತ ಭುಜಂಗರಾಯರಿಗೆ' ಅಂತ ಕೂಗು—ಕಿವಿ ಕೃಪುಡಾಗಿ ಹೋಯಿತು.

ಭುಜಂಗ: ಸಾವಿರ ಸಲ ಸಾರುತ್ತೇನೆ—ನನ್ನನ್ನು ಕಾಡಬೇಡಿ—ನಾನು ಶಾಂತ ಜೀವನ ನಡೆಸುವ ಮನುಷ್ಯ—ಸರೋವರದಂಥ ನನ್ನ ಜೀವನದಲ್ಲಿ ತುಫಾನು ಎಬ್ಬಿಸಬೇಡಿ!—ಮತ್ತೆ ನಿಮ್ಮ ಸಂತೋಷ!

ರಾಮುಪ್ಪಯ್ಯ: ಹೇಳಿದೆವಲ್ಲ ಸ್ವಾಮಿ, ಅದು ಯಾವತ್ತೂ ಪ್ರಜಾಲೋಕದ ಏಕಕಂಠದ ಬೇಡಿಕೆ!

ಭುಜಂಗ: ನಿಂತೆ! ರಾಮುಪ್ಪಯ್ಯ, ನೀವೆಲ್ಲ ಹಾಗೆ ಅಪೇಕ್ಷಿಸಿದಾಗ, ನಿಂತೆ! ಆದರೆ, ಯಾರಾದರೂ ಸ್ಪರ್ಧಿಸಿದರೆ ಮತ್ತೆ .......

ರಾಮುಪ್ಪಯ್ಯ: ಬಿಡಿ ಸ್ವಾಮಿ ಆ ಮಾತು! ಸ್ಪರ್ಧೆಗೆ ನಿಲ್ಲುವ ಧೈರ್ಯ ಯಾರಿಗೂ ಇಲ್ಲ. ಉಂಟೇ ಪಂತರೇ?

ವಿಠ್ಠಲಪಂತ: ಯಾರಾದರೂ ಉಂಟೆಂದರೆ ಊರು ಬಿಟ್ಟೆ.

ಭುಜಂಗ: (ಒಳಬಾಗಿಲ ಕಡೆ ನೋಡಿ) ಲಕ್ಷ್ಮೀ!

(ಲಕ್ಷ್ಮಿ ಬರುವಳು.)

ಭುಜಂಗ: ಲಕ್ಷ್ಮೀ, ಕೇಳಿದಿಯೇನು? ನಾನೇ ನಿಲ್ಲಬೇಕಂತೆ I alone stand up.

ಲಕ್ಷ್ಮಿ: ಎಲ್ಲಿ? ಏಕೆ? ನನಗರ್ಥವಾಗಲಿಲ್ಲ.

ಭುಜಂಗ: ನೋಡಿ ರಾಮುಪ್ಪಯ್ಯಾ, ನಮ್ಮ ಮನೆಯು ಒಳಗೆ ಅದರ ಸದ್ದು ಕೇಳಿಸಿದ್ದೇ ಇಲ್ಲ! Woman always slow—all head no brains!

ರಾಮುಪ್ಪಯ್ಯ: ಗೊತ್ತಿಲ್ಲವೇ ಅಮ್ಮಾ! ತಮ್ಮ ಯಜಮಾನರು ಚುನಾವಣೆಗೆ ನಿಲ್ಲಬೇಕೆಂದು ಈ ಸರ್ಕಲಿನ ಜನರೆಲ್ಲಾ ಆಗ್ರಹಪಡುತಿದ್ದಾರೆ.

ವಿಠ್ಠಲಪಂತ: "ಭುಜಂಗರಾವ್ ಝಿಂದಾಬಾದ್" ಅಂತ ಆಚೆ ಕೂಗದ್ದಲವೇ ಗದ್ದಲ!

ಭುಜಂಗ: ಕೇಳು ಲಕ್ಷ್ಮೀ! ನಿನ್ನ ಗಂಡನ ವಿಷಯ ನಿನಗೆ ಮಾತ್ರ ತಿಳಿದಿಲ್ಲ—ಲೋಕದಲ್ಲೆಲ್ಲ ಕೋಲಾಹಲವಾಗುತ್ತಿದೆಯಲ್ಲ!

ಲಕ್ಷ್ಮಿ: ಚುನಾವಣೆಯ ವಿಷಯವೇ?

ಭುಜಂಗ: (ನಗುತ್ತ) ಅಷ್ಟೆ! ಒಟ್ಟು ನಾಲ್ಕಕ್ಷರ. ಸರಿ ನೆನಪಿಟ್ಟುಕೋ. Woman is memory weak—tongue is strong.

ವಿಠ್ಠಲ ಪಂತ: ನಿಜ ತಾನೆ? ಇನ್ನು ಸೂರ್ಯನ ಹಾಗೇ ಉರಿ.

ರಾಮಪ್ಪಯ್ಯ: ಅವರ ಯಜಮಾನಿ ಹೇಳಿದ ಮಾತು ಸುಳ್ಳಲ್ಲ. ಈ ರಾಯರಿಗೆ ಚುನಾವಣೆ ಬೇಡವಿತ್ತು.

ವಿಠ್ಠಲ ಪಂತ: ಆದರೆ, ನೀವು ಬಿಡಬೇಕಲ್ಲ.

ರಾಮಪ್ಪಯ್ಯ: ಏಕೆ ಬಿಡಬೇಕು? ಅವರ ಜನ್ಮದಲ್ಲಿ ಒಂದು ಚಿಕ್ಕಾಸನ್ನೂ ಹೊರಗೆ ಕೊಟ್ಟವರಲ್ಲ. ಧನವೆಂಬುದು ಒಂದೇ ಕಡೆಯಲ್ಲಿ, ಕೆಸರು ನೀರಿನಂತೆ ನಿಲ್ಲಬಾರದು ನೋಡಿ.

ವಿಠ್ಠಲ ಪಂತ: ಆದರೆ, ಅವರು ಗಂಟು ಬಿಚ್ಚಬೇಕಲ್ಲ!

ರಾಮಪ್ಪಯ್ಯ: ಅವರಪ್ಪ ಬಿಚ್ಚುತ್ತಾರೆ. ಚುನಾವಣೆ ಸ್ವಾಮಿ ಇದು!

ವಿಠ್ಠಲ ಪಂತ: ಅವಿರೋಧ ಆಯ್ಕೆ ಎಂದಿರಲ್ಲಾ!

ರಾಮಪ್ಪಯ್ಯ: ಅದು ಪೀಠಿಕೆ, ಅಷ್ಟೆ; ಮತ್ತೆ ಸ್ಪರ್ಧೆ ಇದೆಯೆಂದರೆ ಹೊಂ ಅನ್ನುವವರು ಭುಜಂಗರಾಯರೇ?

ವಿಠ್ಠಲ ಪಂತ: ಪ್ರತಿಸ್ಪರ್ಧಿಗಳಿರುವರೆಂದಿರಾ? ಯಾರೂ ಮುಂದೆ ಬಂದುದು ಕಾಣಲಿಲ್ಲವಲ್ಲ!

ರಾಮಪ್ಪಯ್ಯ: ಮೊದಲೇ ತಯಾರಿಸಿಟ್ಟಿದ್ದೇನೆ.

ವಿಠ್ಠಲ ಪಂತ: ಯಾರು?

...ಕು ಹೇಳಿಬಿಡಿ. ನಾನು ತವರುಮನೆಗೆ ಹೋಗಿ ನಿಂತು, ಚುನಾವಣೆ ಮುಗಿದ ಕೂಡಲೇ ಬರುತ್ತೇನೆ. (ಒಳಗೆ ಹೋಗುವಳು.)

ಭುಜಂಗ: ರಾಮಪ್ಪಯ್ಯ, ಕೇಳಿದಿರಲ್ಲಾ-ನಮ್ಮ ಯಜಮಾನಿಗೆ ಸಮ್ಮತಿಯಿಲ್ಲ.

ರಾಮಪ್ಪಯ್ಯ: ತಾವು ಯೋಚನೆ ಮಾಡಬೇಡಿ ಸ್ವಾಮಿ! ತಮಗೆ ಪ್ರತಿಸ್ಪರ್ಧೆ ಇದ್ದರಲ್ಲವೆ ಆ ಮಾತು!

ಭುಜಂಗ: ಸ್ಪರ್ಧೆ ಇಲ್ಲವೆ?

ವಿಠ್ಠಲ ಪಂತ: ಮೊದಲೇ ಹೇಳಿಲ್ಲವೆ? ಅಷ್ಟು ಯೋಗ್ಯತೆ ಬೇಕಲ್ಲ! ಏನು ರಾಮಪ್ಪಯ್ಯನವರೇ?

ರಾಮಪ್ಪಯ್ಯ: ಕೇಳಿದಿರಲ್ಲ. ಸೂರ್ಯನ ಮುಂದೆ ನಕ್ಷತ್ರ ಅಂದ ಹಾಗೆ.

ಭುಜಂಗ: ನಿಲ್ಲಲೇ ಬೇಕೆನ್ನುತ್ತೀರಾ? ನಿಂತೆ.

[ಲಕ್ಷ್ಮಿಯ ಪ್ರವೇಶ; ಸೇವಕನಿಂದ ಕಾಫಿ ತರಿಸಿ ಮೇಜಿನ ಮೇಲಿರಿಸುವಳು.]

ಭುಜಂಗ: ಲಕ್ಷ್ಮೀ, ನೀನು ಕಾಫಿ ತರಲು ಹೋದಾಗ ಒಂದು ವಿಶೇಷ ಸಂಗತಿ ನಡೆಯಿತು!

ಲಕ್ಷ್ಮಿ: ಚುನಾವಣೆಗೆ ನಿಲ್ಲಬೇಡಿರೆಂದು ಆಕಾಶವಾಣಿಯಾಯಿತೆ?

ಭುಜಂಗ: ಆಕಾಶವಾಣಿಯಲ್ಲ— ರಾಮಪ್ಪಯ್ಯನವರ ಮುಖಾಂತರ ಲೋಕವಾಣಿ!

ರಾಮಪ್ಪಯ್ಯ: ಲೋಕ ಸಂಘದ ಆ ಚಂದರ್ ಇದ್ದಾನಲ್ಲ! ಅವನೊಬ್ಬ!

ವಿಠ್ಠಲ ಪಂತ: ಅವನೇ? ಅವನೊಡನೆ ಏನಿದೆ? ಸುಮ್ಮನೆ ಈ ಭಾಸ್ಕರನ ಮುಂದೆ ಸುಟ್ಟುಹೋಗಲಿಕ್ಕಿಲ್ಲವೆ?

ರಾಮಪ್ಪಯ್ಯ: ಇಲ್ಲ, ಬೆಂಕಿಯಲ್ಲಿ ಹಾಕಿದರೂ ಸುಡದಂಥ ಜೀವ!

ವಿಠ್ಠಲ ಪಂತ: ಒಳ್ಳೇ ತಮಾಷೆ! ಇದಿನ್ನೂ ಭುಜಂಗರಾಯರಿಗೆ ತಿಳಿದಿಲ್ಲವೆ?

ರಾಮಪ್ಪಯ್ಯ: ತಿಳಿಯಲು ಇನ್ನು ಒಂದೆರಡು ದಿನವಿದೆ, ನಿಲ್ಲಿ. ಆ ಮೇಲೆ ಇನ್ನೊಬ್ಬ ಜಟ್ಟಿಯನ್ನು ತಯಾರಿಸಿದ್ದೇನೆ.

ವಿಠ್ಠಲ: ಯಾರಪ್ಪ?

ರಾಮಪ್ಪಯ್ಯ: ಗೊತ್ತಿಲ್ಲವೆ? ಪಂಜೀಬೈಲ್ ಶಂಕ್ರಯ್ಯ. ಅವನಿಗೂ ಎರಡು-ಮೂರು ಸಾವಿರ ಕೊಡಿಸುತ್ತೇನಂತ ಹೇಳಿದ್ದೇನೆ.

ರಾಮಪ್ಪಯ್ಯ: ಇನ್ನು, ಈಗ ಆ ಮೀನಾಕ್ಷಮ್ಮನ ಮನೆಗೆ ಹೋಗಬೇಕು.

ವಿಠ್ಠಲ: ಅವಳೂ ಈ ತುಫಾನಿಗೆ? ಕೇಳುವಳೇ?

ರಾಮಪ್ಪಯ್ಯ: ಕಳೆದ ಚುನಾವಣೆಯಲ್ಲಿ ಅವಳನ್ನು ನಿಲ್ಲಿಸಬೇಕೆಂದು ಸೂಚನೆ ಬಂದಿತ್ತು. ಅವಳೂ ಒಪ್ಪಿದ್ದಳು. ಅಷ್ಟರಲ್ಲಿ ಅವಳ ಗಂಡನಿಗೂ ಅವಳಿಗೂ ಅನೇಕರು ವಿನಂತಿಸಿ, ಹೆದರಿಸಿ, ನಿಲ್ಲದ ಹಾಗೆ ಮಾಡಿಬಿಟ್ಟರು. ಆದರೆ, ಈ ಬಾರಿ ನಾನು ಮಾತ್ರ ಅವಳನ್ನು ನಿಲ್ಲಿಸದೆ ಬಿಡೋದಿಲ್ಲ. ಈಗ ಅವಳ ಗಂಡ ಇಲ್ಲ ನೋಡಿ.

ವಿಠ್ಠಲ: ಏನು, ಅವಳಿಗೆ ಮೆಸ್ಮರಿಸ್ಮ್ ಮಾಡುತ್ತಿರಾ?

ರಾಮಪ್ಪಯ್ಯ: ಏನುಮಾಡುತ್ತೇನೆಂದು ನೀವು ನೋಡುವಿರಂತೆ. ನೀವೂ ಸ್ವಲ್ಪ ಸಹಾಯಮಾಡಬೇಕು. ಪಾಲು ಇದೆ, ಏನೂ!

ವಿಠ್ಠಲ ಪಂತ: ಭುಜಂಗರಾಯರಲ್ಲಿಗೆ ಹೋಗುವಾಗಲೇ ಅದನ್ನು ಹೇಳಿದ್ದಿರಲ್ಲ. ಸೈ, ಬಿಡಿ ಯೋಚನೆ. ನಮ್ಮ ಧರ್ಮವೇ ಅದು. ಸ್ವಧರ್ಮೇ ನಿಧನಂ ಶ್ರೇಯಃ ಅಂತ! ನಮಗೆ ಇಂಗ್ಲಿಷ್ ಬರೋದಿಲ್ಲ ನೋಡಿ. ನಮ್ಮ ಪ್ರಾಣ-ತ್ರಾಣ ಇರೋದು ಸಂಸ್ಕೃತದಲ್ಲಿ.

ರಾಮಪ್ಪಯ್ಯ: ಇಂಗ್ಲಿಷ್ ತಿಳಿಯದಿದ್ದರೂ ಬುದ್ಧಿ ಜಾಸ್ತಿಯಿದ್ದ ರಾಯಿತು.

ವಿಠ್ಠಲ ಪಂತ: ನಾವು ಚುನಾವಣೆಗಿಲ್ಲ—ನಮ್ಮದು ಬನಾವಣೆ.

ರಾಮಪ್ಪಯ್ಯ: ಅದೆಲ್ಲ ಒಂದೇ ಪಂತರೇ! ಚುನಾವಣೆ ಎಂದರೆ ಬನಾವಣೆ—ಬನಾವಣೆ ಅಂದರೆ ಚುನಾವಣೆ! ಬನ್ನಿ, ಹೋಗೋಣ! (ಹೋಗುವರು.)

## ದೃಶ್ಯ ೩.

[ಮೀನಾಕ್ಷಮ್ಮನವರ ಮನೆ. ಮೀನಾಕ್ಷಮ್ಮ, ತನ್ನ ಸಹೋದರನೊಡನೆ ಚದುರಂಗ ಆಟದಲ್ಲಿ ಮಗ್ನಳಾಗಿರುವಳು. ರಾಮಪ್ಪಯ್ಯ ಮತ್ತು ವಿಠ್ಠಲಪಂತರ ಪ್ರವೇಶ. ಮೀನಾಕ್ಷಮ್ಮ, ಅವರನ್ನು ನೋಡುವುದಿಲ್ಲ.]

ರಾಮಪ್ಪಯ್ಯ: (ಒಂದೆರಡು ನಿಮಿಷ ನಿಂತು, ಕೆಮ್ಮುತ್ತ, ಮೀನಾಕ್ಷಮ್ಮನ ಲಕ್ಷ್ಯವನ್ನೆಳೆಯಲು ಯತ್ನಮಾಡಿ, ಆ ಮೇಲೆ) ವಿಠ್ಠಲ ಪಂತರೇ, ಮೀನಾಕ್ಷಮ್ಮ ಅಂದರೆ ಇವರೇ! ಸಾಕ್ಷಾತ್ ದೇವಿ! ನಮ್ಮೂರಿನವರೆಲ್ಲ ಹೊಗಳುವರು ಎಂದಿರಲ್ಲಾ—ಅವರೇ ಇವರು!

(ಇಬ್ಬರೂ ನಮಸ್ಕರಿಸುವರು.)

ಮೀನಾಕ್ಷಿ: (ಅತಿಥಿಗಳ ಕಡೆ ತಿರುಗಿ) ಯಾರು, ರಾಮಪ್ಪಯ್ಯನವರು? ಯಾವಾಗ ಬಂದಿರಿ? ಸದ್ದೇ ಮಾಡದೆ ಬೆಕ್ಕಿನಂತೆ ಬಂದಿರಾ? ಬನ್ನಿ, ಕುಳಿತುಕೊಳ್ಳಿ. 'ಅವರೇ ಇವರು' ಎಂದಿರಲ್ಲಾ, ಏನದು?

ವಿಠ್ಠಲ ಪಂತ: ಸ್ತ್ರೀಯರ ಶಾಂತತೆಯನ್ನು ಭಂಗಗೊಳಿಸುವುದು ತಪ್ಪು ಅಂತ ಉಪನಿಷದ್ ವಾಕ್ಯವಿದೆ ಅಮ್ಮಾ

ಮೀನಾಕ್ಷಮ್ಮ: ಬಹಳವಾಯಿತಲ್ಲಾ—ಪಂತರೇ! ನಿಂತಿರುವಿರೇಕೆ? ಕುಳಿತುಕೊಳ್ಳಿ. ತಮಗೆ ಕಾಫಿಯೋ, ಚಹವೇ?

ವಿಠ್ಠಲ ಪಂತ: ಏನೂ ಬೇಡ ಅಮ್ಮಾ ತಮ್ಮ ಶಾಂತ ಮಾತುಗಳಿಂದಲೇ ತೃಷೆಯೆಲ್ಲ ಹೋಯಿತು.

ಮೀನಾಕ್ಷಿ: ಮಾತುಗಳಿಂದಲೇ ಬಾಯಾರಿಕೆ ಹೋಗುವುದಾದರೆ ಕ್ಷೇಮವಿತ್ತು ಪಂತರೇ, ಆದರೆ, ಕಾಫಿ ಪುಡಿ ಅಂಗಡಿಗಳು ಹೆಚ್ಚುತ್ತಿರುವು

ರಾಮಪ್ಪಯ್ಯ...ನರಿಗೆ ಈ ನುಡಿಗಿಂತ ಆ ಹುಡಿಯಲ್ಲಿ ವಿಶ್ವಾಸ
ಹೋಗಿದ್ದೆವು. ...ವಾಗುತ್ತಿದೆ. ಮಾಣೀ!
...ನು. “ಎರಡು ಕಾಫಿ ತಂದುಕೊಡು” ಎಂದು ಹೇಳುವಳು.]

ರಾಮಪ್ಪಯ್ಯ: ಮೀನಾಕ್ಷಮ್ಮನವರೇ, ಪಂತರೇನೋ ಹೇಳುತ್ತಾರೆ.

ಮೀನಾಕ್ಷಿ: ಏನು ಪಂತರೇ, ನೀವೇನೋ ಹೇಳುತ್ತಿರುವಿರೆಂದು ರಾಮಪ್ಪಯ್ಯನವರನ್ನುತ್ತಾರೆ—ಆದರೆ, ನಿಮ್ಮ ತುಟಿ ಚಲಿಸುವ ಹಾಗೆ ನನಗೆ ಕಾಣಿಸುತ್ತಿಲ್ಲ.

ವಿಠ್ಠಲ ಪಂತ: (ಕಾಫಿ ತೆಗೆದುಕೊಳ್ಳುತ್ತ) ಮೀನಾಕ್ಷಮ್ಮನವರೇ, ನಾನು ಕೆಲವೇ ಮಾತುಗಳ ಮನುಷ್ಯ.

ಮೀನಾಕ್ಷಿ: ಆ ಕೆಲವು ಮಾತುಗಳನ್ನು ಕೂಡ ನಾನಿನ್ನೂ ಕೇಳಿಲ್ಲ ವಲ್ಲ!

ವಿಠ್ಠಲ ಪಂತ: ನಮ್ಮೂರಿನ ಜನರೆಲ್ಲರೂ ಕೂಡಿ ನನಗೇ ಈ ಆನಂದದ ಕರ್ತವ್ಯವನ್ನೊಪ್ಪಿಸಿಬಿಟ್ಟರು.

ಮೀನಾಕ್ಷಿ: ಯಾವ ಕರ್ತವ್ಯವೆಂದಿರಿ?

ರಾಮಪ್ಪಯ್ಯ: ತಾವು ನಮ್ಮ ಮತದಾರ ಕ್ಷೇತ್ರದಿಂದ ಚುನಾವಣೆಗೆ ನಿಲ್ಲಬೇಕೆಂದು ಎಲ್ಲರೂ ಅಪೇಕ್ಷಿಸುತ್ತಾರೆ.

ಮೀನಾಕ್ಷಿ: (ಆಶ್ಚರ್ಯ, ಆ ಮೇಲೆ ನಗು) ಏನಿದು ರಾಮಪ್ಪಯ್ಯ? ಚುನಾವಣೆಯ ಮಾತೇ? ಯಾವ ಕೆಲಸಕ್ಕೂ ಬಾರದ ಈ ನಿರ್ಜೀವ ಅಬಲೆಗೆ ಒಮ್ಮೆ ಜೀವಕೊಟ್ಟು, ಮತ್ತೆ ಕೊಲ್ಲಬೇಕೆಂದು ಜನರು ಅಪೇಕ್ಷೆ ಪಡುವುದಾದರೆ, ದೇವರಲ್ಲಿ ನನ್ನದೊಂದೇ ಪ್ರಾರ್ಥನೆ—“ಇನ್ನು ನನಗೆ ಈ ಕೊಲೆಗಡುಕರ ಊರಿನಲ್ಲಿ ಜನ್ಮಕೊಡಬೇಡ” ಎಂದು!

ವಿಠ್ಠಲ ಪಂತ: ಶಾಂತಂ ಪಾಪಂ! ಏನು ಮಾತಿದು! ಅಮ್ಮಾ, “ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ” ಅಂತ.

ಮೀನಾಕ್ಷಮ್ಮ: ಕುರಿಗಳನ್ನು ಗುಡಿಯಲ್ಲಿ, ನಾಮವಿಟ್ಟು, ಹೂಮಾಲೆ ಹಾಕಿಯೇ ಕೊಲ್ಲುವ ದೇಶವಲ್ಲವೆ ಪಂತರೇ? ನೀವು ಹೇಳಿದ ಶ್ಲೋಕಕ್ಕೆ ಚೆನ್ನಾಗಿ ಅರ್ಥ ಹೊರಡುತ್ತದೆ.

ರಾಮಪ್ಪಯ: “ಮೀನಾಕ್ಷಮ್ಮ ಝಿಂದಾಬಾದ್” ಅಂತ ಮೊನ್ನೆಯಿಂದ ಆ ಕಡೆ ಕೂಗುಗಳು ಕೇಳಿಬರುತ್ತವೆಂದು ಪಂತರು ಹೇಳಿದರು.

ಮೀನಾಕ್ಷಿ: ತಮಾಷೆಯಿದೆ ಪಂತರೇ! ಅ... ಬುದ್ಧಿ ಜಾಸ್ತಿಯಿದ್ದ ಬಾದ ಇದ್ದಂತೆ 'ಝಿಂದಾಬಾದ್' ಎಂಬ ಒಂದು ... 'ಝಿಂದಾಬಾದ್' ಎಂದು ಕೂಗಬೇಕಾದವರಿಗೆ ಆ ಊರ... ಕೂಗಬೇಕೆಂದು ಒಂದು ಶಾಸನಮಾಡುವುದೊಳ್ಳೆಯದು.

ವಿಠ್ಠಲ ಪಂತ: ತಾವು ಶಾಸನಸಭೆಯಲ್ಲಿ ನಿಜಕ್ಕೂ ಅಂತಹ ಒಂದ ಮಸೂದೆ ತರಬೇಕಮ್ಮ!

ಮೀನಾಕ್ಷಿ: ಏನು, ಇಷ್ಟರೊಳಗೇ ನನ್ನನ್ನು ಚುನಾಯಿಸಿಯೂ ಆಯಿತೇ?

ವಿಠ್ಠಲ ಪಂತ: ತಾವು ಚುನಾವಣೆಗೆ ನಿಲ್ಲದಿದ್ದರೆ ಜನರು ಸತ್ಯಾಗ್ರಹ ಮಾಡುವುದು ಖಂಡಿತ.

ರಾಮಪ್ಪಯ್ಯ: ಭುಜಂಗರಾಯರ ಖಾಸಾ ಹೆಂಡತಿಯೇ ನಿಮ್ಮ ಕಡೆ ಇದ್ದಾರೆ. ಅವರ ಓಟು ನಿಮಗೇ!

ಮೀನಾಕ್ಷಿ: ಬಹಳ ತಮಾಷೆಯಾಗಿ ಕಾಣುತ್ತದೆ! ಆದರೆ, ರಾಮ ಪ್ಪಯ್ಯನವರೇ, ಹೆಂಗುಸಾದ ನನಗೇಕೆ ಚುನಾವಣೆ!

ರಾಮಪ್ಪಯ್ಯ: ಏನಿದು ಮೀನಾಕ್ಷಮ್ಮನವರೇ? ಭುಜಂಗರಾಯ ರೇನು ಹೇಳುವರು ಗೊತ್ತೇ?

ಮೀನಾಕ್ಷಿ: ಏನಂತೆ?

ರಾಮಪ್ಪಯ್ಯ: ಅಮ್ಮಾ, ಹೇಳಬಾರದು. ಆದರೂ ಹೇಳುತ್ತೇನೆ. "ಅಡುಗೆ ಮಾಡಿ, ಮನೆ ಕಸ ತೆಗೆದು, ಗಂಡನಿಗೂ ಮಕ್ಕಳಿಗೂ ಬಡಿಸುವ ಹೆಂಗಸರಿಗೆ ಶಾಸನ ಸಭೆ ಏಕೆ?"

ವಿಠ್ಠಲ ಪಂತ: ಮತ್ತೆ ಇಂಗ್ಲಿಷಿನಲ್ಲೇನೊ ಹೇಳಿದರು.

ರಾಮಪ್ಪಯ್ಯ: ಅಹುದು. Woman is all head—no brains ಅಂತ.

ಮೀನಾಕ್ಷಿ: (ತುಸು ಕೋಪದಿಂದ) ಹಾಗೆಂದರೇ?

ರಾಮಪ್ಪಯ್ಯ: ಮತ್ತೆ ಕೆಲವು ಬಯ್ಗಳನ್ನೂ ಬಯ್ದರು. ಆದರೆ,.... ನಮಗೇಕೆ ಆ ಕುತ್ಸಿತ ಮಾತುಗಳು? ಅಲ್ಲವೇ ಪಂತರೇ?

ಮೀನಾಕ್ಷಿ: ಬಯ್ದರೇ?

ವಿಠ್ಠಲ ಪಂತ: ಅವಾಚ್ಯ ಶಬ್ದಗಳಮ್ಮಾ! ನಮ್ಮ ನಿಘಂಟಿನಲ್ಲಿ ಅಂತಹ ಶಬ್ದಗಳೇ ಇಲ್ಲ.

ರಾಮಪ್ಪಯ್ಯ: ನೀವು ಚುನಾವಣೆಗೆ ನಿಲ್ಲುವಿರೆಂದು ಹೇಳಲು ಹೋಗಿದ್ದೆವು. ಅವರ ಬೆಂಬಲವನ್ನು ಕೇಳಿದೆವು. ಕೇಳಿದ್ದೇ ತಡ— "Silly goose"—"ಬಟಾಟೆ ಹೆಂಗಸು"—"ಸೋರೆಕಾಯಿ ಬುರುಡೆ" ಕ್ಷಮಿಸಿರಮ್ಮಾ! ಫಕ್ಕನೆ ಬಾಯಿಗೆ ಬಂದುಹೋಯಿತು.

ಮೀನಾಕ್ಷಿ: ಚಾಂಡಾಲ! ನಾನವನಿಗೆ ಯಾವ ಅನ್ಯಾಯಮಾಡಿ ದ್ದೇನೆ ಪಂತರೇ? (ಕಣ್ಣೊರಸಿ)

ವಿಠ್ಠಲ ಪಂತ: ಅಯ್ಯೋ, ಉಂಟೇ!

ರಾಮಪ್ಪಯ್ಯ: ನಿಂತರೆ ಅವನಪ್ಪನ ಗಂಟೇನು ಹೋಯಿತು?

ವಿಠ್ಠಲ ಪಂತ: ನಿಲ್ಲುವುದು ನಿಮ್ಮ ಜನ್ಮಸಿದ್ಧ ಹಕ್ಕು! ಅಮ್ಮಾ, ನಿಲ್ಲಲೇಬೇಕು! ಆ ಭುಜಂಗನಿಗೆ ಒಂದೂ ಓಟು ಸಿಕ್ಕದ ಹಾಗೆ ಮಾಡುವ ಕೆಲಸ ನನ್ನದು. ನಮ್ಮ ಕ್ಷೇತ್ರಕ್ಕೆ ಬಂದರೆ, ಅವನಿಗೆ ಕರಿಪತಾಕೆ!

ರಾಮಪ್ಪಯ್ಯ: Go back ಭುಜಂಗಾ ಅಂತ ಬರೆದು!

ವಿಠ್ಠಲ ಪಂತ: ಗಂಡಸರಿಗಿಂತ ಹೆಂಗಸರ ಓಟು ಹೆಚ್ಚು! ಅಲ್ಲವೇ ರಾಮಪ್ಪಯ್ಯ?

ಮೀನಾಕ್ಷಿ: ಪಂತರೇ, ನಾನು, ಕಳೆದ ಚುನಾವಣೆಯ ಕಾಲದಲ್ಲಿ ಒಂದಿಷ್ಟು ಮನಸ್ಸುಮಾಡಿದ್ದೆ. ಆ ಮೇಲೆ, ಏಕೋ ಆ ಗೊಂದಲ ಬೇಡ ವೆಂದು ಸುಮ್ಮಗೆ ಬಿದ್ದುಕೊಂಡಿದ್ದೆ. ಆದರೆ, ಈಗ, ಆ ಕಾಳ ಭುಜಂಗನು ಬುಸುಗುಟ್ಟುತಿದ್ದಾನೆ. ನನಗೆ ಕೆರಳಿದೆ. ನಿಲ್ಲುವೆನು!

ರಾಮಪ್ಪಯ್ಯ: ವ್ಹಾ ವ್ಹಾ! ಸ್ಪಿರಿಟ್ ಅಲ್ಲವೇ ಅಮ್ಮಾ ಅದು? ನೋಡಿ, ಪಂತರೇ! ನಾನು ಮೊದಲೇ ಹೇಳಿಲ್ಲವೆ,—ಮೀನಾಕ್ಷಮ್ಮನವರಿಗೆ ಮನಸ್ಸಾದರೆ ಹತ್ತು ಭುಜಂಗರಾಯರನ್ನು ಅರೆದು ನೀರು ಕುಡಿಯುವ ರೆಂದು! ಆ ಭುಜಂಗರಾಯರಿಗೆ— ಅವರ ಸ್ಥಾನ ಎಸೆಂಬ್ಲಿಯಲ್ಲ ಎಂದು ಮಾತ್ರ ತೋರಿಸಿಕೊಡಬೇಕು.

ಮೀನಾಕ್ಷಿ: ಅವನು ಭುಜಂಗನಾದರೆ ನಾನು ಮುಂಗುಸಿ!

ಪಂತ, ರಾಮಪ್ಪಯ್ಯ: ವ್ಹಾ, ವ್ಹಾ!

(ಹೋಗುವರು)

ತೆರೆ.

## ದೃಶ್ಯ ೪.

[ರಸ್ತೆ: ರಾಮಪ್ಪಯ್ಯ ಮತ್ತು ವಿಠ್ಠಲ ಪಂತ ಬರುತ್ತಿರುವರು.]

ರಾಮಪ್ಪಯ್ಯ: ನೋಡಿದಿರಲ್ಲವೆ ಪಂತರೇ ಜಗತ್ತನ್ನು? ಕೆಲವರಿಗೆ ಸ್ತುತಿ ಬೇಕು, ಕೆಲವರಿಗೆ ಕೆರಳಿಸಬೇಕು, ಕೆಲವರಿಗೆ ಹಣ ಬೇಕು, ಮತ್ತೆ ಕೆಲವರಿಗೆ ಎಲ್ಲ ಬೇಕು.

(ಚಂದರ್ ಪ್ರವೇಶಿಸುವನು)

ಚಂದರ್: ರಾಮಪ್ಪಯ್ಯನವರೇ? ನಮಸ್ತೇ, ನಮಸ್ತೇ!

ರಾಮಪ್ಪಯ್ಯ: ಚಂದರ್? ನಮಸ್ತೇ.

ವಿಠ್ಠಲ ಪಂತ: ಇವರೇ ಏನು,–ನಮ್ಮ ಚುನಾವಣಾ ಹುರಿಯಾಳು?

ರಾಮಪ್ಪಯ್ಯ: ಇವರೇ! ಹೇಗೆ, ಠೀಕಾಗಿರುವರಲ್ಲವೇ?

ವಿಠ್ಠಲ ಪಂತ: ನಿಜಕ್ಕೂ ಇವರಷ್ಟು ಠೀವಿಯ ಜನವನ್ನು ನಾನು ನನ್ನ ಜನ್ಮದಲ್ಲಿ ಎಲ್ಲಿಯೂ ನೋಡಿಲ್ಲ! ವ್ಹಾ ವ್ಹಾ! ಆ ಶರ್ಟಿನ ಕಿವಿ ನಿಂತ ರೀತಿ ನೋಡಿ! ▪ ಕೈ ರಟ್ಟೆಗಳ ಮೇಲೆ ಶರ್ಟು ಸುರುಳಿ ಸುರುಳಿಯಾಗಿ ಎದ್ದು ತೋರುವ ಸೊಬಗು ನೋಡಿ! ಬರೇ ಚಲ್ಲಣ ನೋಡಿದರೇ ಇದ್ದ ಓಟುಗಳೆಲ್ಲ ಇವರಿಗೇ ಖಂಡಿತವೆಂದು ಈಗಲೇ ಭವಿಷ್ಯ ಹೇಳಬಹುದು. ಇನ್ನು ಹೊಸ ಮಾದರಿ ಕ್ರಾಪ್! ಅದನ್ನು ನೋಡಿದ ಮೇಲೆ ಜನರು ಇವರಿಗೆ ಓಟು ಕೊಡದಿದ್ದರೆ ಮತ್ತೆ ಲೋಕದಲ್ಲಿ ನ್ಯಾಯ-ಸತ್ಯ-ತೇಜಸ್ಸು-ಪಾತ್ರ ನೋಡಿ ದಾನ ಎಂಬ ನೀತಿ ಯಾವುದೂ ಇಲ್ಲವೆಂದೇ ಅರ್ಥ.

ಚಂದರ್: (ವಿನೋದವಾಗಿ) ಯಾರಿವರು ಒಳ್ಳೇ ಮನುಷ್ಯರು, ರಾಮಪ್ಪಯ್ಯನವರೇ? ಬಹಳ ವಿದ್ಯಾವಂತರಂತೆ ಕಾಣುತ್ತಾರೆ. ಕೆಟ್ಟ ಮಾತನ್ನೇ ಆಡೋದಿಲ್ಲ. ಇಂಥ ಜನ ಲೋಕದಲ್ಲಿ ಬಹಳ ಕಮ್ಮಿ.

ರಾಮಪ್ಪಯ್ಯ: ಇವರು ನನ್ನ ಮಿತ್ರರು—ವಿಠ್ಠಲ ಪಂತರೆಂದು ಹೆಸರು.

ಚಂದರ್: ಪಂತಜೀ, ಸಂತೋಷವಾಯಿತು. ನಾನು ಚುನಾವಣೆಯಲ್ಲಿ ಸೋತರೂ ಚಿಂತೆಯಿಲ್ಲ—ನಿಮ್ಮ ಮಾತನ್ನು ಕೇಳಿ ಉಂಟಾದ ಆನಂದವನ್ನು ಮರೆಯಲಾರೆ!

ವಿಠ್ಠಲ ಪಂತ: ನೀವು ಸೋಲುವುದೆಂದರೇನು? ಸಿಂಹಕ್ಕೆ ಸೋಲುಂಟೇ? ಹೆದರಿಕೆಯುಂಟೆ?

ಚಂದರ್: ಹೆದರಿಕೆ ಗಿದರಿಕೆ ಅಲ್ಲ. ನಮ್ಮ ಆಟ ಚಂದ ರೀತಿಯಲ್ಲಿ ಸಾಗಲಿ ಅಂತ!............

(ಗೇಂದು ಮತ್ತು ಗೋಪು ಬರುತ್ತಿರುವರು)

ಚಂದರ್: ಅಕೊಳ್ಳಿ, ಬಂದರಲ್ಲ ಗೇಂದು ಎಂಡ್ ಕಂಪೆನಿ! (ವಿಠ್ಠಲ ಪಂತರ ಕಡೆ ತಿರುಗಿ) ಪಂತರೇ, ಇವರು ಗೇಂದು, ಇವರು ಗೋಪು. ಇದೊಂದು ಅಪ್ರತಿಮ ಜೋಡಿ. ಈ ಜೋಡಿಗೆ ಸಾವು-ನೋವುಗಳೆಂದಿಲ್ಲ. ಇವರಿಗೆ 'ಬೆಲ್ಜಿಯಮ್ ಕೋಟೆ ಒಡೆಯಿರಿ' ಎನ್ನೋದು-ಒಡೆದು ಬರುತ್ತಾರೆ. 'ಸ್ಟೀಮರ್ ಮುಳುಗಿಸಿರಿ' ಅನ್ನಿ, ಕಲ್ಲು ಹೊಡೆದಾದರೂ ಮುಳುಗಿಸುತ್ತಾರೆ. ಯಾವ ರಾಷ್ಟ್ರಕ್ಕೂ ಗೌರವದ ಜೋಡಿ ಇದು! ಗೇಂದೂ, ಕೆಲಸ ಹೇಗಾಯಿತು?

ಗೇಂದು: ನೆಟ್ಟಗೆ! ಪತ್ರಿಕೆಯಲ್ಲಿ ದಪ್ಪ ಅಕ್ಷರಗಳಲ್ಲಿ ನಿನ್ನ ಹೆಸರು ಬಂದು ಹೋಯಿತು. ಅದರ ಜತೆಯಲ್ಲಿ ಭುಜಂಗರಾಯರ ಹೆಣವನ್ನು ಹೊಳಬಿಟ್ಟೂ ಆಯಿತು!

ಚಂದರ್: (ಸಂತೋಷದಿಂದ, ರಾಮಪ್ಪಯ್ಯನವರಿಗೆ) ನೋಡಿ! ನಾನು ಹೇಳಲಿಲ್ಲವೇ? ಇನ್ನೇನು ಮಾಡಬೇಕು, ಹೇಳಿರಿ.

ರಾಮಪ್ಪಯ್ಯ: ಇನ್ನು, ನಾಮಪತ್ರ ದಾಖಲುಮಾಡಿದ ದಿನವೇ ಒಂದು ಭಾಷಣ ಏರ್ಪಡಿಸಬೇಕು. ಅದರಲ್ಲಿ ಡೊಳ್ಳು ಹೊಟ್ಟೆಯವರನ್ನೆಲ್ಲ ಚೆನ್ನಾಗಿ ಥಳಿಸಬೇಕು............ಪಂತರೇ, ಹೇಗೆ ನಮ್ಮ ಜನ?

ವಿಠ್ಠಲ ಪಂತ: ಭುಜಂಗರಾಯರಿಗೆ ತಲೆಸಿಡಿತ ಕೊಡುವಷ್ಟು ಯೋಗ್ಯತೆಯು ಅವನಲ್ಲಿ ಖಂಡಿತವಾಗಿ ಇದೆ.

[ಚಂದರ್ ಹೋಗುವನು; ಭುಜಂಗರಾಯರ ಪ್ರವೇಶ; ಕಂಕುಳಲ್ಲಿ ದಪ್ಪಗಿನ ಚರ್ಮದ Wallet]

ಭುಜಂಗ: ಏನು ಪಂತರೇ, ಯಾರ ಯೋಗ್ಯತೆಯ ಕುರಿತು ಮಾತಾಡುತಿದ್ದಿರಿ?

ರಾಮಪ್ಪಯ್ಯ: ಭುಜಂಗರಾಯರೇ, ನಿಮ್ಮ ಯೋಗ್ಯತೆಯ ಕುರಿತು ಮಾತಾಡುತಿದ್ದೆವು. (ಹಲ್ಲು ಕಡಿದು, ಮೆಲ್ಲಗೆ) ಅಧಮ! ಹಜಾಮ!

ವಿಠ್ಠಲ ಪಂತ: (ಹಲ್ಲು ಕಡಿದು) ಕಾಳಸರ್ಪ! ಪಾಷಾಣ!

ಭುಜಂಗ: (ಬೆರಗಾಗಿ) ಯಾರಿಗಯ್ಯ ಇದು ಸಹಸ್ರನಾಮ?

ರಾಮಪ್ಪಯ್ಯ: ಭುಜಂಗರಾಯರೇ, ಸರ್ವನಾಶವಾದರೂ ಆ ಅಧ್ವ
ನನ್ನು ಬಿಡಬಾರದು!

ಭುಜಂಗ: (ಗಾಬರಿಯಿಂದ) ಯಾರನ್ನು? ಏಕೆ?

ವಿಠ್ಠಲ ಪಂತ: ಆ ಚಂದರ್, ದಂಗೆಖೋರ!

ರಾಮಪ್ಪಯ್ಯ: ಚುನಾವಣೆಗೆ ಸ್ಪರ್ಧಿಸುತ್ತಾನೆ!

ಭುಜಂಗ: (ಕಂಕುಳಲ್ಲಿನ Wallet ಕೆಳಗೆ ಬಿಟ್ಟು, ಮತ್ತೆ ಹೆಕ್ಕಿ
ನಡುಗುತ್ತ) ಚುನಾವಣೆಗೆ ಚಂದರ್! ಚಂದರ್ ಚುನಾವಣೆಗೆ!

ರಾಮಪ್ಪಯ್ಯ: (ಭುಜಂಗರಾಯರನ್ನು ಹಿಡಿದು) ಏನಿದು ಭುಜಂ
ರಾಯರೇ? ಸಿಂಹವು ಆಡಿನ ಮರಿಗೆ ಹೆದರುವುದೇ? ಎಲ್ಲಿ ಹೋಯಿತ
ನಿಮ್ಮ ಪೌರುಷ! ಎಲ್ಲಿ ಹೋಯಿತು ನಿಮ್ಮ ಠೀವಿ, ಗಾಂಭೀರ್ಯ, ಧೈರ್ಯ
ಸ್ಥೈರ್ಯ, ಶೌರ್ಯ? ಚಂದರ್ ಎಂಬ ಒಂದು ಹೆಸರು ಕೇಳಿ ಹೀಗೆ ಧಾತು
ತಪ್ಪಿದರೆ, ಮುಂದೆ ಚುನಾವಣಾ ಯುದ್ಧದಲ್ಲಿ ಹೇಗೆ ಎದೆಕೊಟ್ಟು ನಿಲ್ಲು
ವಿರಿ ಸ್ವಾಮಿ?

ವಿಠ್ಠಲ ಪಂತ: ಕೃಷ್ಣನು ಅರ್ಜುನನಿಗೆ ಹೇಳಿದ್ದನ್ನು ನೆನಪುಮಾಡಿ
ಕೊಳ್ಳಿ. 'ಅರ್ಜುನಾ, ಕಳವಳಪಡಬೇಡ. ಬಿಲ್ಲಿಗೆ ಬಾಣ ತೊಟ್ಟು
ಹೊಡೀ' ಅಂತ.

ಭುಜಂಗ: (ಸಂಕಟಗೊಂಡು) ಹೇ ರಾಮಪ್ಪಯ್ಯಾ, 'ಅವಿರೋಧ
ಆಯ್ಕೆ', 'ಪ್ರತಿಸ್ಪರ್ಧೆಯಿಲ್ಲ' ಅಂತ ಸಂಸ್ಕೃತ ಶಬ್ದಗಳನ್ನು ಹೇಳಿ ನನ್ನನ್ನು
ಕೊಂದಿರಲ್ಲ!

ರಾಮಪ್ಪಯ್ಯ: ಛೀ, ಎಂಥ ಮಾತಿದು ಭುಜಂಗರಾಯರೇ! ಚುನಾ
ವಣೆಗೆ ನಿಂತರೆ ಮಾನ-ಮರ್ಯಾದೆ ಎಲ್ಲ ನಿಮಗೇ! ನಮಗೇನಿದೆ? ಈಗ
ನೀವೇನೂ ನಿಮ್ಮ ನಾಮಪತ್ರ ದಾಖಲುಮಾಡಿಲ್ಲ—ಬೇಡವಾದರೆ ಬಿಟ್ಟುಬಿಡಿ!

ಭುಜಂಗ: ಹೇಗೆ ಬಿಟ್ಟುಬಿಡುವುದು ರಾಮಪ್ಪಯ್ಯ! ಪತ್ರಿಕೆಗಳಿಗೆ
ನನ್ನ ಹೆಸರನ್ನು ಕಳಿಸಿದ್ದೇನೆ.

ವಿಠ್ಠಲ ಪಂತ: ಭುಜಂಗರಾಯರೇ, ಚಂದರನಂತಹ ಹುಲ್ಲುಕಡ್ಡಿಗೆ
ಹೆದರಿ ಬಿಟ್ಟೀರೆಂದರೆ ಇನ್ನೇನು ಉಳಿಯಿತು? ಸಮಾಜದಲ್ಲಿ ಸ್ಥಾನವಿಲ್ಲ;
ಸಾರ್ವಜನಿಕ ಸೇವೆ ಮಾಡಿದವನಲ್ಲ; ಚುನಾವಣೆಗೆ ಖರ್ಚುಮಾಡಲು
ಹಣವಿಲ್ಲ.

ರಾಮಪ್ಪಯ್ಯ: ಮಾತ್ರವಲ್ಲ, ನಿಶ್ಚಯವಾಗಿ ನಾಮಪತ್ರ ದಾಖಲು ಮಾಡುತ್ತಾನೋ ಎಂಬುದು ಇನ್ನೂ ತಿಳಿಯಬೇಕಾಗಿದೆ.

ಭುಜಂಗ: ನೀವು ಹೇಳಿದ್ದು ನಿಜ! ನಡೀರಿ, ಹೋಗೋಣ! ನೀವು ಅವನ ಹೆಸರು ಹೇಳಿದ ಕೂಡಲೇ ಒಮ್ಮೆಗೆ ಭಸಕ್ ಎಂದ ಹಾಗಾಯಿತು. ಅಲ್ಲೆಲ್ಲಿಯಾದರೂ ಒಂದು ಸೋಡಾ ಇದ್ದರೆ ತಂದುಕೊಡಿ. ನನಗೆ ಅಗ್ನಿ ಜಾಸ್ತಿ! (ಹೋಗುವರು)

[ಶಂಕ್ರಯ್ಯನ ಪ್ರವೇಶ. ಕುಡಿದು ಬರುತ್ತಿದ್ದಾನೆ]

ಶಂಕ್ರಯ್ಯ: (ಸ್ವಗತ) ಪಂಜೀಬೈಲ್ ಶಂಕ್ರಯ್ಯ ಅಂದರೆ ನಾನು! ಶಂಕ್ರಯ್ಯ ಪಂಜಿಬೈಲ್ ಅಂತಲೂ ಕರೆಯುತ್ತಾರೆ. ಆದರೆ, ಮುದ್ದಿನ ಹೆಸರು 'ಪಂಜೀ' ಅಂತ! ಚುನಾವಣೆಗೆ ನಿಂತವನು ನಾನೇ! ನನ್ನನ್ನು ನಿಲ್ಲೂ ಅಂದರು—ನಿಂತೆ. ಮೂರು ಸಾವಿರ ರೂಪಾಯಿ ತಕ್ಕೋ—ಹೋಗು ಅಂತಾರೆ—ಹೋಗೋದಿಲ್ಲ. ಎಸೆಂಬ್ಲಿಗೆ ಮೆಂಬರಾಗಿ ನನಗೆ ನಾಲ್ಕು ದಿನ ಭಾಷಣ ಮಾಡಬೇಕೂಂತ ಮನಸ್ಸು! Subject ಒಂದೇ—ನೀವು ಪ್ರೊಹಿಬಿಶನ್ ತೆಗೀತಿರೊ ಅಥವಾ ನಾನು ಸತ್ಯಾಗ್ರಹ ಮಾಡಿ, ಎಸೆಂಬ್ಲಿ ಕುರ್ಚಿಯ ಮೇಲೆ ಪ್ರಾಣ ಬಿಡಬೇಕೋ ಅಂತ ಒಂದೇ ಪ್ರಶ್ನೆ ಕೇಳೋದು! ಒಂದು Single question--ನಾಲ್ಕು ದಿವಸ ಕೇಳೋದು-ಐದನೇ ದಿನ ಸತ್ಯಾಗ್ರಹ-ಆರನೇ ದಿನ ಕೋಲಾಹಲ--ಏಳನೇ ದಿನ ಠಮ್! ನಾನು ಪ್ರಾಣ ಬಿಡದಿದ್ದರೆ ಇವರಿಗೆ ಬುದ್ಧಿ ಬರೋದಿಲ್ಲ! ಅಲ್ಲ—ಒಂದು ಚಮ್ಚ ಶರಾಬು ಕುಡಿಯಬೇಕಾದರೆ ಕದ್ದು ಕುಡಿಯಬೇಕು! ಮತ್ತೆ ಲೋಕದಲ್ಲಿ ಸತ್ಯ ಉಳಿಯೋದು ಹೇಗೆ? ಎಲ್ಲರಿಗೆ ಸಮಾನ ಹಕ್ಕು ಅನ್ನುತಿದ್ದಾರೆ-ನಮ್ಮ ಹಕ್ಕು ಕಸಿದುಕೊಂಡು ಬಿಟ್ಟಿದ್ದಾರೆ. ಎಲ್ಲರಿಗೆ ಸಮಾನ ಸಂದರ್ಭ ಅಂದಿದ್ದಾರೆ--ನಮಗೆ ಕುಡಿಯಲು ಸಂದರ್ಭ ಒದಗಿಸಿ ಕೊಟ್ಟಿಲ್ಲ. ಶರಾಬು ಅಂದರೆ ವಿಷವಂತೆ--ಮತ್ತೆ ಕಾಫಿ ಹೊಟೇಲುಗಳಲ್ಲಿ ಹಂಚುತ್ತಿರೋದು ಅಮೃತ ಅಂತ ಇವರು ರುಜು ಪಡಿಸಲಿ ನೋಡೋಣ! (ಕೈ ಬೀಸುವನು)

[ಶಂಕ್ರಯ್ಯನ ಸ್ನೇಹಿತ ಬಂದು, ಅವನ ಕೈಗೆ ಹಿಡಿದು ಕರೆದೊಯ್ಯುವನು.]

## ದೃಶ್ಯ ೫.

[ಭುಜಂಗರಾಯರ ಮನೆ ಕೊಠಡಿ. ಸುತ್ತಲೂ, ಕಾಗದದ ಕಟ್ಟುಗಳ ರಾಶಿ ಹಾಕಿ, ಭುಜಂಗರಾಯರು ತಲೆಗೆ ಕೈಕೊಟ್ಟು ಕುಳಿತಿರುವರು. ಹೆಂ ಲಕ್ಷ್ಮಿ ಬಂದು,—]

ಲಕ್ಷ್ಮಿ: ಊಟಕ್ಕೆ ಬನ್ನಿ!

ಭುಜಂಗ: (ಫಕ್ಕನೆ ಮೈದೆಗೆದು, ರೋಷದಿಂದ) ಏನೇ ಅದು, ರೀತಿ ಮೆಲ್ಲನೆ ಬಂದು ಗದರಿಸೋದು? ಒಮ್ಮೆಗೆ ಪ್ರಾಣ ಹಾರಿತು ನೋ

ಲಕ್ಷ್ಮಿ: ಬನ್ನಿ ಊಟಕ್ಕೆ!

ಭುಜಂಗ: ನಾನು ಊಟ ಮಾಡೋದಿಲ್ಲ.

ಲಕ್ಷ್ಮಿ: ನಿನ್ನೆ ರಾತ್ರೆ ನಿದ್ದೆಯೂ ಮಾಡಿಲ್ಲ; ಈಗ–ಊಟ ಬೇ ವೆನ್ನುತ್ತೀರಿ! ನಾನು ಹೇಳಿಲ್ಲವೆ ಆ ದಿನ,—ಚುನಾವಣೆಯೆಂದರೆ ನಿದ್ದೆಯ ಇಲ್ಲ, ಊಟವೂ ಇಲ್ಲ ಎಂದು! ನೀವು ನಿದ್ದೆ ಮಾಡದೆ ಯೋಚನೆಯಿ ನನಗೂ ನಿದ್ದೆಯಿಲ್ಲ; ನೀವು ಊಟ ಮಾಡದೆ ನನಗೂ ಹಸಿವಾಗುವುದಿ ನಿಮ್ಮಲ್ಲಿ ಚುನಾವಣೆಯು ಉದ್ವೇಗವೊಂದಿದೆ—ನನ್ನಲ್ಲಿ ಅದು ಇಲ್ಲ. ನಾ ಹಾಸಿಗೆ ಹಿಡಿಯುತ್ತೇನೆ.

ಭುಜಂಗ: ಎರಡು ತಲೆದಿಂಬು ಹೆಚ್ಚು ಇಟ್ಟುಕೊ—ನಡೆ!

ಲಕ್ಷ್ಮಿ: ಮತ್ತೆ ನಿಮ್ಮನ್ನು ನೋಡಿಕೊಳ್ಳುವವರಾರು?

ಭುಜಂಗ: ನನ್ನನ್ನು ಯಾರೂ ನೋಡಬೇಕಾಗಿಲ್ಲ. ನಾನು ಕಟ್ಟುಗಳಿಗೆ ತಲೆಗೊಟ್ಟು ಇಲ್ಲೆ ಮಲಗುತ್ತೇನೆ.

ಲಕ್ಷ್ಮಿ: ನಿಮಗೆ ತಲೆ ಹಾಳಾಗಿದೆ!

ಭುಜಂಗ: (ಗದರಿಸುತ್ತ) ಹಾಳಾದರೆ ಸುಖವಾಗುತಿತ್ತು! "ಇವ ತಲೆಹಾಳು—Unfit" ಅಂತ ನನ್ನನ್ನು ತೆಗೆದು ಹಾಕುತಿದ್ದರು. ಯುದ್ಧಮಾಡಿಯೇ ತೀರಬೇಕು.

ಲಕ್ಷ್ಮಿ: ಬೇಕೆಂದು ತಂದುಕೊಂಡ ಯುದ್ಧ,ಯಾರಿಗೆ ಕೊಡುವಿರ

ಭುಜಂಗ: ಲಕ್ಷ್ಮಿ, ನೀನು ಪತಿವ್ರತೆ ಆಹುದಾದರೆ ಸ್ವಲ್ಪ ಒ ಹೋಗು. ಮರಕುಟಿಗನ ಹಕ್ಕಿಯು ಹಾಗೆ ತಲೆಗೆ ಕುಟ್ಟಬೇಡ!

ಲಕ್ಷ್ಮಿ: ಊಟಕ್ಕೆ ಬನ್ನಿ.

ಭುಜಂಗ: ಬರುತ್ತೇನೆ, ಬರುತ್ತೇನೆ, ಬರುತ್ತೇನೆ. ರಾಮಪ್ಪಯ್ಯ
ರಲಿ—ನಾಲ್ಕು ಮಾತು ಕೇಳಿ ಮತ್ತೆ ಬರುತ್ತೇನೆ. ಅಕೋ ಬಂದರು.
ನ್ನು ನೀನು ಒಳಗೆ ಹೋಗು.

(ಲಕ್ಷ್ಮಿ ಹೋಗುವಳು, ರಾಮಪ್ಪಯ್ಯನ ಪ್ರವೇಶ.)

ರಾಮಪ್ಪಯ್ಯ: ಭುಜಂಗ ರಾಯರೇ!

ಭುಜಂಗ: ಓ!

ರಾಮಪ್ಪಯ್ಯ: ನಿಮ್ಮ ಚುನಾವಣಾ ಘೋಷಣೆ ತಯಾರಾಗಿದೆ.
ನ್ನು ಈ ದಿನ ತಾವು, ಆ ಚಂದರನ ಭಾಷಣದ ಮಾದರಿ ನೋಡಬೇಕು.
ತ್ತೆ ನಾಳೆ ನಿಮ್ಮ ಭಾಷಣ ಆರಂಭವಾಗಬೇಕು!

ಭುಜಂಗ: ಏನಂತ?

ರಾಮಪ್ಪಯ್ಯ: ನಿಮ್ಮ ಟೀಕಾಕಾರರಿಗೆಲ್ಲ ನೀವು ಉತ್ತರ ಕೊಡ
ೇಕು. ನಿಮ್ಮನ್ನು ಚುನಾಯಿಸಿದರೆ ಜನರಿಗೆ ಪ್ರಯೋಜನ ಏನಂತ
ವರಿಸಬೇಕು!

ಭುಜಂಗ: ಆಯಿತಲ್ಲ, ರಾಮಪ್ಪಯ್ಯನವರೇ! ಹಸಿ ಹಸಿ ಹೊಳ
ೀಡಿರೆಂದರೆ ಹೊಳಿಯೇ ಬಿಟ್ಟಿರಲ್ಲ!

ರಾಮಪ್ಪಯ್ಯ: ನೀವು ಹಾಗೆಂದರೆ ಆದೀತೇ? ಎಲ್ಲವೂ ಅನಿರೀಕ್ಷಿತ
ಂದು ನಿಮಗೆ ಗೊತ್ತೇ ಇದೆ. ಚುನಾವಣೆಯಲ್ಲಿ ಜಯ ಸಿಕ್ಕುವುದು
ಮಗೇ ಅಂತ ಎದೆ ತಟ್ಟಿ ಹೇಳಬಲ್ಲೆ. ಜನರೆಲ್ಲ ನಿಮಗಲ್ಲದೆ ಮತ್ತಾರಿಗೂ
ಟು ಕೊಡುವುದಿಲ್ಲ ಎಂದು ಆಣೆ ಹಾಕಿ ಹೇಳಿದ್ದಾರೆ.

ಭುಜಂಗ: ಹಾಗಾದರೆ, ಮತ್ತೇಕೆ ಈ ಭಾಷಣ?

ರಾಮಪ್ಪಯ್ಯ: ಜನರೇನೋ ತಮ್ಮನ್ನೆ ಅಪೇಕ್ಷಿಸುತ್ತಾರೆ—ನಿಜ.
ದರೆ, ಅನ್ಯಾಯವಾದ ಟೀಕೆ—ಅಪಪ್ರಚಾರ ನಡೆಯುತ್ತಿರುವಾಗ, ಜನರು,
ಮ್ಮ ಭಾವೀ ಮುಖಂಡನು ಅವುಗಳಿಗೆ ತಕ್ಕ ಉತ್ತರ ಕೊಡಲು ಸಮರ್ಥ
ಂತ ಸ್ವತಹ ನೋಡಲು ಇಚ್ಛಿಸುತ್ತಾರೆ. ನೀವು ಹೀಗೆ ಮೌನವಾಗಿ
ಳಿತರೆ, ಜನರಿಗೆ ನಿರಾಶೆಯಾಗುವುದು; ನಿಮ್ಮ ಮೇಲಿನ ವಿಶ್ವಾಸ
ಗ್ಗುವುದು.

ಭುಜಂಗ: ವಿಶ್ವಾಸ ಕುಗ್ಗುವುದೇ? ಅಂತೂ, ಸುಮ್ಮಗೆ ನನ್ನಷ್ಟಕ್ಕೇ
ದ್ದುಕೊಂಡವನಿಗೆ ಒಂದು ದಾರಿ ತೋರಿಸಿದಿರಿ ನೀವು! ನನ್ನೆದುರಿಗೆ

ನಿಲ್ಲುವ ಧೈರ್ಯ ಯಾರಿಗೂ ಇಲ್ಲವೆಂದು ಹೇಳಿದಿರಿ. ಈಗ ಎಲ್ಲವೂ ಅನಿರೀಕ್ಷಿತ ಅನ್ನುತ್ತ—ಭಾಷಣವೇದಿಕೆಗೆ ನನ್ನನ್ನೊಯ್ದು ಅಲ್ಲಿ ಬಲಿ ಕೊಡುತ್ತೀರಿ!

[ವಿಠಲ ಪಂತನ ಪ್ರವೇಶ]

ಭುಜಂಗ: ಏನು ಪಂತರೇ, ನಿಮ್ಮ ಕಂಕುಳಲ್ಲಿ ಆ ಕಟ್ಟೇನು?

ವಿಠಲ ಪಂತ: ಪತ್ರಿಕೆ ಸ್ವಾಮೀ—“ಶುಕವಾಣಿ” ಅಂತ.

ಭುಜಂಗ: ಏನಂತೆ ಶುಕವಾಣಿ?

ವಿಠಲ ಪಂತ: ನಿಮ್ಮ ವಿಷಯ ಒಂದು ಲೇಖನ ಬಂದಿದೆ.

ಭುಜಂಗ: ನೋಡೋಣ, ಓದಿರಿ.

ವಿಠಲ ಪಂತ: (ಪತ್ರಿಕೆ ಬಿಡಿಸಿ ಓದುವನು) “ಹಣವಿದ್ದರೆ ಹೆಣವೂ ಚುನಾವಣೆಗೆ ನಿಲ್ಲಬಹುದು”—ಇದು ಆ ಲೇಖನದ ಶಿರೋನಾಮೆ.

ಭುಜಂಗ: (ಕೋಪದಿಂದ ತತ್ತರಿಸಿ) Stupid rascal! ನೋಡಿ ರಾಮಪ್ಪಯ್ಯಾ—ಬರವಣಿಗೆಯ ರೀತಿ! ಅದು ‘ಶುಕವಾಣಿ’ಯೋ, ‘ಸೂಕರವಾಣಿ’ಯೋ, ಹೇಳಿ ಸ್ವಲ್ಪ!

ವಿಠಲ ಪಂತ: (ಮುಂದೆ ಓದುತ್ತ) “ಚುನಾವಣೆಗಳೆಂದರೆ ಹೆಣಗಳೂ ಬಾಯಿ ಬಿಡುತ್ತವೆ. ಇತ್ತೀಚೆಗೆ ಒಬ್ಬಿಬ್ಬರು ಧನಾಢ್ಯರು, ಧನಮದದಿಂದ ಮತ್ತರಾಗಿ, ಚುನಾವಣೆಗೆ ತಮ್ಮ ನಾಮಪತ್ರ ಸಲ್ಲಿಸಿ ಅಟ್ಟಹಾಸದಿಂದ ಮೆರೆಯ ಹತ್ತಿರುವರು. ಎಸೆಂಬ್ಲಿಗೆ ಇವರ ಯೋಗ್ಯತೆ ಯಾವುದೆಂದು ಕೇಳಬೇಡಿ. ಕಳ್ಳ ಸಂತೆಯಲ್ಲಿ ಅಕ್ಕಿ ಮಾರಿದ್ದು; ಬಡವರನ್ನು ಗೋಳಾಡಿಸಿ, ತಾವು ಡೊಳ್ಳು ಹೊಟ್ಟೆ ಹಿಡಿದು ಮೆರೆದುದು.......... ಈ ಕೂಟದಲ್ಲಿ ಬಿಳಿ ಬೈಲು ಭುಜಂಗರಾಯರೂ ಒಬ್ಬರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ.......”

ಭುಜಂಗ: ಪಂತರೇ, ಸಾಕು ಮಾಡಿ! ಅದರಲ್ಲಿ ನನ್ನ ಹೆಸರೊಂದು ಸರಿ; ಉಳಿದುದೆಲ್ಲ ತಪ್ಪು.

ರಾಮಪ್ಪಯ್ಯ: ನಾಳೆಯ ಈ ಭಾಷಣದಲ್ಲಿ ನೀವು ಇದಕ್ಕೆ ಉತ್ತರ ಕೊಡಬೇಕು.

ಭುಜಂಗ: ಏನೆಂದು?

ರಾಮಪ್ಪಯ್ಯ: ಪತ್ರಿಕಾ ಮರ್ಯಾದೆಗೆ ಮೀರಿದ ಈ ತರದ ದುಷ್ಟ ಲೇಖನಗಳ ಉದ್ದೇಶವನ್ನು ಜನರೇ ಊಹಿಸಿಕೊಳ್ಳಬೇಕೆನ್ನುತ್ತ, ಇಂಥ ಲೇಖನ ಪ್ರಕಟಣೆಗೆ ಕಾರಣರಾದವರು ಚುನಾಯಿಸಿ ಬಂದರೆ ಜನರ ಪಾಡು ಏನಾಗಬಹುದೆಂದು ವಿವರಿಸಿರಿ.

ಭುಜಂಗ: ಜನರ ಪಾಡು ಏನಾಗುತ್ತದೆ?

ವಿಠಲ ಪಂತ: ಅರಾಜಕತೆ, ಅನ್ಯಾಯ, ಸುಲಿಗೆ, ಭಂಡುಮಾತಿನ ಪ್ರಚಾರ ಇತ್ಯಾದಿ.

ಭುಜಂಗ: ಸುಲಿಗೆ ಮಾಡುವವರು ನಾವೇ ಅನ್ನುತ್ತಾರಲ್ಲ ಅವರು?

ರಾಮಪ್ಪಯ್ಯ: ಅಲ್ಲವೆಂದು ನೀವು ಹೇಳಬೇಕು.

ಭುಜಂಗ: ಅವರು ಅಹುದೆನ್ನುವುದು—ನಾನು ಅಲ್ಲವೆನ್ನುವುದು—ಇದೇ ಕೆಲಸವಾಯಿತಲ್ಲ!

ರಾಮಪ್ಪಯ್ಯ: ಉಪಾಯವಿಲ್ಲ.

ಭುಜಂಗ: ಉಪಾಯವಿಲ್ಲ—ಎಲ್ಲಾ ಅಪಾಯವೇ! ತಿಳಿಯಿತು. ಆಗಲಿ, ಅಷ್ಟೆಲ್ಲಾ ಆಗಿ ನನ್ನ ಜೀವವೊಂದು ಉಳಿದರೆ, ಮುಂದೆ ನನ್ನ ಮಕ್ಕಳಿಗೆ ಒಂದು ಬುದ್ಧಿವಾದ ಬರೆದಿಡಬೇಕೆಂದಿದ್ದೇನೆ—ಪಂಚ ಮಹಾ ಪಾತಕಗಳನ್ನು ಬೇಕಾದರೆ ಮಾಡಿರಿ—ಚುನಾವಣೆಗೆ ಮಾತ್ರ ನಿಲ್ಲಬೇಡಿ ಅಂತ! ನೀವು ನಡೆಯಿರಿ—ಭಾಷಣವೇದಿಕೆಯ ವ್ಯವಸ್ಥೆ ಮಾಡಿರಿ—ನಾನು ನಮ್ಮ ಯಜಮಾನಿಯವರ ಭಾಷಣದಿಂದ ತಪ್ಪಿಸಿಕೊಳ್ಳಲು ಒಂದಂಸು ಅನ್ನ ನುಂಗಿ, ಮತ್ತೆ ನನ್ನ ಭಾಷಣ ತಯಾರಿಸಿಕೊಳ್ಳುತ್ತೇನೆ.

[ರಾಮಪ್ಪಯ್ಯ—ಪಂತ ಹೊರಡುವರು. ಹೋಗುತ್ತಾ, "ಪಂತರೇ, ಭುಜಂಗ ರಾಯರು ನಾಳೆ ಭಾಷಣ ಮಾಡುವ ಮೈದಾನಿನಲ್ಲೆ, ಈ ದಿನ ಚಂದರ ನಿಗೆ ಸಭೆ ಕೂಡಿಸಿ ಭಾಷಣ ಮಾಡಲು ಹೇಳಿದ್ದೇವಲ್ಲವೆ? ಭುಜಂಗ ರಾಯರು ಸ್ವಲ್ಪ ಕೇಳಲಿ. ಅವರಲ್ಲೂ ಹೋರಾಟದ ಆವೇಶವುಂಟಾಗಲಿ. ಭುಜಂಗ ರಾಯರನ್ನು ಕರೆದುಕೊಂಡೇ ಹೋಗೋಣ" ಎನ್ನುತ್ತ ಹೋಗುವರು.]

(ಹೋಗುವರು)

## ದೃಶ್ಯ ೬.

[ತೆರೆ ಏಳುವುದು; ಮೈದಾನು—ಅಥವಾ—ಉಪವನ; ಎದುರುಗಡೆ ಮೇಜನ್ನಿಟ್ಟು, ಚಂದರ್ ಭಾಷಣಕ್ಕೆ ನಿಂತಿರುವನು. ಸಭಿಕರು ಕುಳಿತುಕೊಂಡಿರುವರು.]

ಚಂದರ್: (ತಲೆ ಕೊಡಹಿ, ಆವೇಶದಿಂದ) ಇಂದು ನಿಮ್ಮ ಮುಂದೆ ನಿಂತಿರುವ ನಾನು ನಿಮ್ಮಂತೇ ಸಾಮಾನ್ಯ ಮನುಷ್ಯನು. ನಿಮ್ಮಲ್ಲಿ ಹರಿವ ನೆತ್ತರೇ ನನ್ನಲ್ಲೂ ಹರಿಯುತ್ತಿದೆ. ನಾಡಿ ಮಾತ್ರ ಬೇರೆ. ನಾನು ಮುಖಂಡನಲ್ಲ, ನಿಮ್ಮ ಸೇವಕನಾಗಲು ಬಂದಿದ್ದೇನೆ. ಈ ವರೆಗೆ ನಾನೂ ನೀವೂ, ಬಂಡವಾಳಷಾಹಿ ಯಾನೆ ಭುಜಂಗಷಾಹಿಯ ಕಾಲಡಿಯಲ್ಲಿ ದೇಹವನ್ನು ಸವೆಯಿಸಿದ್ದೇವೆ. ಇನ್ನು ಸಾಕು. "ಪಯಃಪ್ಪಾನಾಂ ಭುಜಂಗಾನಾಂ ಕೇವಲಂ ವಿಷವರ್ಧನಂ" ಅಂತ ಹೇಳುವರು—ಸುಳ್ಳಲ್ಲ. ನಾವಿನ್ನು ಭುಜಂಗನಿಗೆ ಹಾಲು ಕೊಡುವವರಲ್ಲ. ನನ್ನ ಸಹೋದರರೇ, ನಮ್ಮ ಸಂಕಷ್ಟಗಳನ್ನು ನಾವೇ ಪರಿಹರಿಸಿಕೊಳ್ಳುವ ಕಾಲ ಬಂದಿದೆ. ಈಗ ನಾವೂ ಎಸೆಂಬ್ಲಿಗೆ ಹೋಗುವೆವು-ಭುಜಂಗಷಾಹಿಯನ್ನು ಕಾದಾಡುವೆವು. ಹೋಗಿ, ನಮ್ಮ ಹಕ್ಕುಗಳನ್ನು ಸ್ಥಾಪಿಸಿ, ನಮಗೆ ಬೇಕಾದ್ದನ್ನು ಕಸಿದುಕೊಳ್ಳುವೆವು. (ಮುಷ್ಟಿಯೆತ್ತಿ ಮೇಜಿಗೆ ಬಡಿದು, ನೋವಾಗಿ, 'ಓ' ಎಂದು ಕೂಗಿ, ಕೈ ಹಿಂಬೆಗೆವನು.)—ನೀವು ನನ್ನನ್ನೆ ಚುನಾಯಿಸುವಿರಿ, ಬಲ್ಲೆ. ನಾನು ನಿಮ್ಮ ಪ್ರತಿನಿಧಿ. ನಾನು ಎಸೆಂಬ್ಲಿಗೆ ಹೋದರೆ ನೀವೆಲ್ಲರೂ ಹೋದಂತೆ. ನಿಮಗೆ ಸಮ್ಮತಿಯೆ? ಎಲ್ಲಿ, ಕೈಯೆತ್ತಿರಿ ನೋಡೋಣ! (ಸಭಿಕರು ಕೈಯೆತ್ತುವರು.) ಶಾಭಾಸ್! ಆ ಎತ್ತಿದ ಕೈಗಳನ್ನು ಕೆಳಗಿಳಿಸದೆ ನಾಡದು ನಿಮ್ಮ ಓಟುಗಳನ್ನು ನನ್ನ ಪೆಟ್ಟಿಗೆಗೇ ಹಾಕಿರಿ. ನನ್ನ ಪೆಟ್ಟಿಗೆಯ ಮೇಲೆ ಗರುಡನ ಚಿತ್ರವಿದೆ. ನಮ್ಮ ನೆತ್ತರು ಕುಡಿವ ಭುಜಂಗನನ್ನು ಹಿಡಿದು ತಿನ್ನುವ ಪಕ್ಷಿ ನಾನು!

[ಭುಜಂಗರಾಯರ ಪ್ರವೇಶ—ರಾಮಪ್ಪಯ್ಯ ಮತ್ತು ವಿಠ್ಠಲ ಪಂತರೊಡನೆ.]

ಬಂಧುಗಳೇ! ನನ್ನ ಚುನಾವಣಾ ಘೋಷಣೆಯನ್ನು ನೀವು ಇಷ್ಟರೊಳಗೇ ಓದಿರಬಹುದು.

[ಚುನಾವಣಾ ಘೋಷಣೆಯ ಪ್ರತಿಗಳನ್ನು ಒಬ್ಬನು ಹಂಚುವನು]

ಆದರೊಳಗಿನ ಕೆಲವಂಶಗಳನ್ನು ಹೇಳುತ್ತೇನೆ:

ತಿಂಗಳಿಗೆ ನೂರು ರೂಪಾಯಿಗಿಂತ ಕಡಿಮೆ ಸಂಪಾದನೆ ಇದ್ದವರಿಗೆ ಒಂದೊಂದು ಮನೆ, ಒಂದೊಂದು ಎಕ್ರೆ ಸ್ಥಳ. ತಿಂಗಳಿಗೆ ನೂರು ರೂಪಾಯಿ

ಗಿಂತ ಹೆಚ್ಚು ಸಂಪಾದನೆಯಿದ್ದವರಿಗೆ ಮನೆ ಮಾತ್ರ. ಐನೂರಕ್ಕೂ ಮಿಕ್ಕಿ ಸಂಪಾದನೆ ಇದ್ದವರಿಗೆ ಸೇಕಡಾ 60ರಷ್ಟು ತೆರಿಗೆ—ಈ ತೆರಿಗೆಗೆ "ಅಜೀರ್ಣ ತೆರಿಗೆ" ಎಂದು ಹೆಸರು. ತಿಂಗಳಿಗೆ ಸಾವಿರ ರೂಪಾಯಿ ಸಂಪಾದನೆಯಿದ್ದವರಿಗೆ ಸೇಕಡಾ 80ರಷ್ಟು ತೆರಿಗೆ—ಈ ತೆರಿಗೆಗೆ "ದರೋಡೆಖೋರ ತೆರಿಗೆ" ಅಂತ ಹೆಸರು. ಸಾವಿರಕ್ಕೂ ಮಿಕ್ಕಿ ಸಂಪಾದನೆ ಇದ್ದರೆ "ಒಪರೇಶನ್ ತೆರಿಗೆ"ಯನ್ನೂ, ಹತ್ತು ಸಾವಿರವಿದ್ದರೆ "ಪಿಸ್ತೂಲ್ ತೆರಿಗೆ"ಯನ್ನೂ ಹೊರಿಸಲಾಗುವುದು. ಹೇರಳ ಜಮೀನು ಇದ್ದವರಿಗೆ ಜಾಮೀನಿಲ್ಲದ ಶಿಕ್ಷೆ—ಹಲವು ಮನೆಗಳಿದ್ದವರಿಗೆ ಅನಾಥಾಶ್ರಮ. ಅರಮನೆಗಳವರು ಸೆರಮನೆಗೆ—ಸೆರೆಮನೆಗಳವರು ಅರಮನೆಗೆ ವರ್ಗಾವರ್ಗಿ ಮಾಡಲ್ಪಡುವರು. ಗಜೆಟಿನಲ್ಲಿ ಆಗಾಗ್ಗ ಈ ವರ್ಗಾವರ್ಗಿಗಳನ್ನು ಪ್ರಕಟಿಸಲಾಗುವುದು. ಕೆಲಸಗಾರರ ಕೆಲಸದ ಅವಧಿಯನ್ನು ದಿನಕ್ಕೆ ಐದು ಗಂಟೆಗೆ ಇಳಿಸಿ, ಸಂಬಳವನ್ನು ಸೇಕಡಾ ಇನ್ನೂರಕ್ಕೆ ಏರಿಸುವೆವು. ಹೆಂಗುಸರಿಗೆ ಗರ್ಭಿಣಿ ರಜೆ ಮತ್ತು ಪ್ರಸೂತಿ ರಜೆ ಎಂದು ಎರಡು ವಿಧದ—ಒಟ್ಟು ವರ್ಷದಲ್ಲಿ ಆರು ತಿಂಗಳ ಹಕ್ಕಿನ ರಜೆಯನ್ನೂ ಹನ್ನೆರಡು ದಿನ ಆಕಸ್ಮಿಕ ರಜೆಯನ್ನೂ ಕೊಡಿಸುವೆವು.

ತ್ರಾಣವಿಲ್ಲದ ಕಾರಣ ಇಪ್ಪತ್ತನಾಲ್ಕು ವರ್ಷಗಳಿಗಿಂತ ಕೆಳಗಿನ ಮಕ್ಕಳನ್ನು ಕಾರ್ಖಾನೆಗಳಲ್ಲಿ ಕೆಲಸಕ್ಕೆ ಹಚ್ಚುವುದಿಲ್ಲ. ಜನರ ಆಯುಷ್ಯ ಕಡಿಮೆಯಾದ ಕಾರಣ ಪೆನ್ಶನ್ ಪ್ರಾಯವನ್ನು 55ರಿಂದ 44ಕ್ಕೆ ಇಳಿಸುವೆವು. ಗಂಡನಿಗೆ ಹೆಂಡತಿಯನ್ನೂ ಹೆಂಡತಿಗೆ ಗಂಡನನ್ನೂ ಮದುವೆಯಾದ ದಿನದಿಂದಲೇ ಬಿಟ್ಟುಬಿಡುವ ಸವಲತ್ತುಗಳನ್ನು ಕೊಡುವೆವು. ಎಲ್ಲರಿಗೆ ಧರ್ಮಾರ್ಥ ಜನನ—ಧರ್ಮಾರ್ಥ ಮರಣ. ಅಂದರೆ, ಧರ್ಮಾರ್ಥ ಹೆರಿಗೆ, ಧರ್ಮಾರ್ಥ ಶವಸಂಸ್ಕಾರ.

ಬಂಧುಗಳೇ, ನಾವು ಕೊಡುವ ಸೌಕರ್ಯಗಳು ಇನ್ನೂ ನೂರಾರು ಇವೆ. ಅವುಗಳನ್ನೆಲ್ಲ ಇಲ್ಲಿ ವಿವರಿಸಲು ಸಮಯ ಸಾಲದು. ಸಾರಾಂಶ ಇಷ್ಟೆ: ಬಂಡವಾಳಷಾಹಿಯಿಂದ ಈ ಲೋಕಕ್ಕೂ ಸುಖವಿಲ್ಲ—ಪರಲೋಕಕ್ಕೂ ಇಲ್ಲ. ಬಂಡವಾಳಷಾಹಿ ನಾಶವಾಗಿ ನಾವೇ ಉಳಿಯಬೇಕಾದರೆ ನಿಮ್ಮ ಓಟನ್ನು ನನಗೇ ಕೊಡಿರಿ! ಭುಜಂಗಷಾಹೀ ಮುರ್ದಾಬಾದ್."

[ಸಭೆ ಬರಖಾಸ್ತಾಗಿ ಚಂದರ್ ಹೋಗುವನು. ಭುಜಂಗ, ರಾಮಪ್ಪಯ್ಯ ಮತ್ತು ವಿಠ್ಠಲ ಪಂತರು ಮುಂದೆ ಬರುವರು.]

ವಿಠ್ಠಲ ಪಂತ: ಭುಜಂಗರಾಯರಿಗೆ ಆಯಾಸವಾಯಿತೇ?

ಭುಜಂಗ: ಇಲ್ಲ; ಪ್ರಾಣ ಹಾರಿಹೋಯಿತು.

ರಾಮಪ್ಪಯ್ಯ: 'ಪಯಪ್ಪಾನಾಂ ಭುಜಂಗಾನಾಂ' ಅಂತ ಆರಂಭಿಸಿ, 'ಭುಜಂಗಷಾಹಿ' ಅಂತ ಅಣಕನಾಡಿ, ಆ ನೀಚನು "ಭುಜಂಗಷಾಹಿ ಮುರ್ದಾಬಾದ್" ಅಂದು ಮುಗಿಸಿದನಲ್ಲ!

ಭುಜಂಗ: ಮುಗಿಸಿದ್ದಲ್ಲ—ನನ್ನನ್ನು ಎಂಟಡಿ ಹೊಂಡದಲ್ಲಿ ದೂಡಿ, ಮಣ್ಣು ಮುಚ್ಚಿಬಿಟ್ಟ.

ವಿಠ್ಠಲ ಪಂತ: ಮಾನನಷ್ಟದ ವ್ಯಾಜ್ಯ ಮಾಡೋಣವೇ?

ಭುಜಂಗ: ಅವನು ನನ್ನ ಮಾನ ತೆಗೆಯಲಿಲ್ಲ—ಪ್ರಾಣ ತೆಗೆದಿದ್ದಾನೆ. ಬೇಕಾದರೆ ಪ್ರಾಣನಷ್ಟ ವ್ಯಾಜ್ಯ ಮಾಡಿರಿ!

[ರಾಮಪ್ಪಯ್ಯ—ವಿಠ್ಠಲ ಪಂತ ಮೌನವಾಗುವರು.]

ಭುಜಂಗ: (ಮೆಲ್ಲನೆ, Blank ಆಗಿ ನೋಡುತ್ತ) ಪ್ರತಿಸ್ಪರ್ಧೆಯಿಲ್ಲ! ರಾಮಪ್ಪಯ್ಯ, ಆ ಚಂದರನನ್ನು ನೀವು ನನ್ನ ದಾರಿಯಿಂದ ತೆಗೆಸಬೇಕು! (ಫಕ್ಕನೆ ಕೋಪದಿಂದ) ಇಲ್ಲದಿದ್ದರೆ ನಾನು ಶೂಟ್ ಮಾಡಿಕೊಂಡು, ನೀವು ಕೊಂದಿರಿ ಅಂತ ಚೀಟು ಬರೆದಿಟ್ಟು ಪ್ರತಿಸ್ಪರ್ಧೆಯಿಲ್ಲದೆ ಹೋಗುತ್ತೇನೆ.

ರಾಮಪ್ಪಯ್ಯ: ಭುಜಂಗರಾಯರೇ, ನಿಮಗೆ ನಿಜಕ್ಕೂ ತಲೆಗೆಟ್ಟಿದೆ. ಆ ಹುಳಕ್ಕೇಕೆ ನೀವು ಹೆದರುತ್ತೀರಿ?

ಭುಜಂಗ: (ಕೋಪದಿಂದ) ಏನಯ್ಯಾ, ಹುಳ ಹುಳ ಎನ್ನುತ್ತೀರಿ? ಆ ಹುಳದ Size ಹೇಳುತ್ತಿಲ್ಲವಲ್ಲಾ ನೀವು! ಆ ಹುಳ ಕಚ್ಚುತ್ತಿರುವುದು ನನಗೆ—ನಿಮಗಲ್ಲ! ನೋವು ನನಗೆ—ನಿಮಗಲ್ಲ! ಹುಳವಂತೆ! ಆ ಮನುಷ್ಯ ಕಾಳಿಂಗದಷ್ಟು ದೊಡ್ಡವನಿದ್ದಾನೆ—ಮತ್ತೂ ಹುಳವಂತೆ! ಅವನು ತನ್ನ ನಾಮಪತ್ರ ಹಿಂದೆಗೆವಂತೆ ಮಾಡುತ್ತೀರೋ—ಅಥವಾ ನಾನು ಆತ್ಮಹತ್ಯೆ ಮಾಡಬೇಕೋ ತಿಳಿಸಿರಿ.

ವಿಠ್ಠಲ ಪಂತ: ಸ್ವಾಮಿ, ಮಧ್ಯಾಹ್ನ ಅವನಲ್ಲಿಗೆ ಹೋಗಿದ್ದೆವು; ಎರಡು ಸಾವಿರ ಕೊಡುತ್ತೇವೆ—ಹಿಂದೆಗೆಯಿರಿ ಎಂದು ಹೇಳಿದೆವು.

ಭುಜಂಗ: (ಆಸಕ್ತಿಯಿಂದ) ಏನೆಂದ?

ರಾಮಪ್ಪಯ್ಯ: ಅದು ನೂರು ಮುಡಿ ಅಕ್ಕಿಯ ಬ್ಲೆಕ್ ಮಾರ್ಕೆಟ್ ಹಣ! ಮುಟ್ಟಿದರೆ ಕೈ ಸುಟ್ಟುಹೋದೀತೆಂದ.

ಭುಜಂಗ: Stupid rascal! ಬಹಳ ಮಡಿವಂತ! ಅವನ Red Marketನಲ್ಲಿ ಅವನು ಸುಟ್ಟುಹೋಗುವುದಿಲ್ಲವೆ? ಘಟಿಂಗ! ಪಂತರೇ, ಅಕ್ಕಿಯಿಲ್ಲದವರು ಜಮೀನ್ದಾರರನ್ನು ದೂರುವುದು—ಜಮೀನ್ದಾರರು ಅಲ್ಲ ಎನ್ನೋದು—ಈ ಅನ್ಯಾಯ ಎಷ್ಟು ಕಾಲ ನಡೆಯಬೇಕಂತೆ?

ವಿಠ್ಠಲ ಪಂತ: ಮೂರು ಸಾವಿರ ಮಾಡಿಕೋ ಅಂದೆವು.

ಭುಜಂಗ: ಹೇಳಿಯಾಯಿತೆ? ಹೋಗಲಿ.

ರಾಮಪ್ಪಯ್ಯ: ಆದರೆ, ಅವನೊಪ್ಪಲಿಲ್ಲ. ಆ ಮೂರು ಸಾವಿರ— ನೂರು ಜನರ ರಕ್ತದ ಹಣ ಅಂತ ಹೇಳಿಬಿಟ್ಟ.

ಭುಜಂಗ: Double Donkey! ದೊಡ್ಡ ಪರಮ ಹಂಸ! ರಾಮಪ್ಪಯ್ಯಾ, ಇಂತಹ ಹೊಲಸು ಬಾಯಿಯವರು ಎಸೆಂಬ್ಲಿಗೆ ಹೋದರೆ ಜನರ ಗತಿ ಏನು ಅಂತ!

ವಿಠ್ಠಲ ಪಂತ: ಕಠಿಣ ಜನ ಸ್ವಾಮಿ!

ರಾಮಪ್ಪಯ್ಯ: ಆದರೂ ಈ ದಿನವೇ ಪುನಃ ಪ್ರಯತ್ನಿಸಿ ನೋಡುತ್ತೇನೆ. ತಾವು ಐದು ಸಾವಿರದ ವರೆಗೆ ನಮಗೆ ಸ್ವಾತಂತ್ರ್ಯ ಕೊಟ್ಟರೆ........!

ಭುಜಂಗ: ಐದು ಸಾವಿರವೇ? ಹೋಗಲಿ. ರಾಮಪ್ಪಯ್ಯ, ಹೇಗಾದರೂ ▪ ನಾರುವ ಹೆಣವನ್ನು ತೆಗೆಸಿಬಿಡಿ.

ವಿಠ್ಠಲ ಪಂತ: ನನ್ನದೊಂದು ಸೂಚನೆ ಸ್ವಾಮಿ!

ಭುಜಂಗ: ಇನ್ನೂ ಸೂಚನೆ ಮುಗಿಯಲಿಲ್ಲವೆ?

ವಿಠ್ಠಲ ಪಂತ: ಮುಗಿಯಿತು. ನೋಡಿ,-ರಿಕ್ತಹಸ್ತದಿಂದ ಹೋಗಿ ಬರಿಬಾಯಿಯಿಂದ ಮಾತುಕತೆ ನಡೆಸೋದಕ್ಕಿಂತ, ಐದುಸಾವಿರ ರೋಖಡಾ ಅವನ ಮುಂದೆ ಸುರಿದು, 'ನಾಮಪತ್ರ ಹಿಂದೆಗೆ' ಅಂದರೆ, ಸೈ ಅನ್ನುತ್ತಾನೆ. "ಸೈಕೊಲೊಜಿ' ಅದು!

ರಾಮಪ್ಪಯ್ಯ: ಐನೂರು ಜಾಸ್ತಿ ಕೊಡಿ. ಹೋದವರು, ಮುಗಿಸಿಕೊಂಡೇ ಬರುತ್ತೇವೆ. ಮತ್ತೆ ಐನೂರರ ಚರ್ಚೆ ಬಂದು, ವಾಪಾಸು ಬರೋದು ಬೇಡ; ಅಲ್ಲವೇ ಪಂತರೇ?

ಭುಜಂಗ: ಆಗಲಿ. ಚುನಾವಣೆಗೆ ನಿಂತಾಯಿತಲ್ಲ. ಇನ್ನು, ಅವರಿವರು ಕೈಕಾಲು ಕೇಳಿದರೂ ಕಡಿದು ಕೊಡೋದೇ!.... ಇನ್ನು ಮೀನಾಕ್ಷಮ್ಮನ ವಿಷಯವೇನು?

ವಿಠ್ಠಲಪಂತ: ಅವಳಿಗೆ ಹಣದಾಸೆಯಿಲ್ಲ ಸ್ವಾಮೀ.

ರಾಮಪ್ಪಯ್ಯ: ಛಲ, ಕೇವಲ ಹಟ!

ಭುಜಂಗ: ಹೆಂಗುಸರು ನನ್ನಂಥ ಗಂಡಸಿನ ಮುಂದೆ ಛಲ ಮಾಡಿದರೆ ನಡಿಯಲಿಕ್ಕಿಲ್ಲವೆಂದು ಹೇಳಲಿಲ್ಲವೆ ನೀವು?

ರಾಮಪ್ಪಯ್ಯ: ಧಾರಾಳ ಹೇಳಿಯಾಯಿತು. "ಎಸೆಂಬ್ಲಿ ಎನ್ನಲು ಉಚ್ಚಾರ ತಿಳಿಯದ ಭುಜಂಗರಾಯರಿಗೇಕಂತೆ ಈ ಗೊಂದಲ?" ಎಂದು ಕೇಳುತ್ತಾರವರು.

ಭುಜಂಗ: Insult! ರಾಮಪ್ಪಯ್ಯ, ಆ ಹೆಂಗುಸಿಗೆ ಬುದ್ಧಿ ಕಲಿಸಬೇಕು.

ವಿಠ್ಠಲ ಪಂತ: ಅವಳಿಗದು ಹೆಚ್ಚಿಗೇ ಉಂಟು ಸ್ವಾಮೀ.

ಭುಜಂಗ: Bhujanga is fight! ಬನ್ನಿ ಹೋಗೋಣ. ಅವಳ ಚುನಾವಣಾ ಗುರುತು ಏನಂತೆ?

ರಾಮಪ್ಪಯ್ಯ: ಮುಂಗುಸಿ!

ಭುಜಂಗ: (ಕೋಪದಿಂದ): Stupid woman! ಹೆಂಗುಸು ಮುಂಗುಸಿಯೂ ಆಗುತ್ತದೆ ಚುನಾವಣೆಯಲ್ಲಿ!....ಇರಲಿ. ಇನ್ನು ನಮಗೆ ಏನೇನೆಲ್ಲ ಬೇಕು?

ವಿಠ್ಠಲ ಪಂತ: ಐದೂವರೆ ಸಾವಿರ—ಚಂದರನಿಗೆ! ಮತ್ತೆ ಏಳೆಂಟು ಮೋಟಾರು, ಕೆಲವು ಕೆಲಸಗಾರರಿಗೆ ಸ್ವಲ್ಪ ಸ್ವಲ್ಪ ರೂಪಾಯಿ-ಓಟರರಿಗೂ ಅವಶ್ಯ ಬಿದ್ದರೆ ಕೊಡಲಿಕ್ಕೆ ಅಷ್ಟೊಂದು ಹಣ...........

ಭುಜಂಗ: ಒಟ್ಟು ಎಷ್ಟಾದೀತು?

ವಿಠ್ಠಲ ಪಂತ: ಇಪ್ಪತ್ತು ಸಾವಿರಕ್ಕೆ ಮೀರುವಂತಿಲ್ಲ.

ಭುಜಂಗ: ಅಷ್ಟಾದರೆ ಸಾಕು—ನನ್ನ ಶರ್ಟಾದರೂ ಉಳಿಯಿತೆಂದು ಸಂತೋಷ! ಇನ್ನು, ನಾಳೆ ನನ್ನ ಭಾಷಣವಾಗಬೇಕಲ್ಲವೆ?

ರಾಮಪ್ಪಯ್ಯ: ಅಹುದು ಸ್ವಾಮೀ, ನಾವು ಕರಪತ್ರ ಮೂಲಕ ಜಾಹೀರು ಮಾಡಿದ್ದೇವೆ--

ಭುಜಂಗ: ರಾಮಪ್ಪಯ್ಯಾ, ಒಂದುಪಾಯ! ಇಂಗ್ಲಿಷಿನಲ್ಲಿ ಭಾಷಣ ಮಾಡೋದೆಂತ! ಹೇಗೆ?

ವಿಠ್ಠಲ ಪಂತ: ಇಂಗ್ಲಿಷಿನಲ್ಲಿ? ಒಳ್ಳೇ ಉಪಾಯ! ತಮಗೆ ಅಷ್ಟು ದೊಡ್ಡ ಆಲೋಚನೆ........?

ಭುಜಂಗ: (ಪುನಃ ನಗುತ್ತ) ಬಂದದ್ದಲ್ಲ ಪಂತರೆ--ಅದು (ತನ್ನ ತಲೆಗೆ ಬೆರಳಿಟ್ಟು) ಇಲ್ಲೇಲ್ಲೋ ಇತ್ತು, ಆಲೋಚನೆಗಳಿಗೆ ಈ ಮನುಷ್ಯ ಚಿಲ್ಲರೆ ಜನ ಅಲ್ಲ.

ರಾಮಯ್ಯ: ಸ್ವಾಮಿ, ತಾವು ಇಂಗ್ಲಿಷಿನಲ್ಲಿ ಮಾತಾಡಿದರೆ ಅರ್ಥ ಮಾಡಿಕೊಳ್ಳುವವರು ಯಾರೂ ಅಂತ?

ಭುಜಂಗ: ಇಂಗ್ಲಿಷನ್ನು ಕನ್ನಡ ಮಾಡುವ ಆ ವೃತ್ತಿಯವನೇ ಇದ್ದಾನಲ್ಲ—ನಮ್ಮ ಗೋವಿಂದರಾವ್ ಸಖಾರಾವ್! ಅವನ ಇಡೀ ಜೀವನ ನನ್ನಂಥವರ ಭಾಷಣಗಳ ತರ್ಜುಮೆಯಲ್ಲಿ! ಬೇರೆ ವೃತ್ತಿಯೇ ಅವನಿಗೆ ತಿಳಿಯೋದಿಲ್ಲ.

ವಿಠ್ಠಲ ಪಂತ: ಈ ಚುನಾವಣೆ ಮುಗಿದ ಕೂಡಲೇ ಅವನಿಗೊಂದು ಬಿರುದು ಕೊಡಬೇಕು ಸ್ವಾಮಿ.

ಭುಜಂಗ: (ಅಹುದೆಂದು ತಲೆಯಲ್ಲಾಡಿಸಿ) ಅಹುದು, "ಭಾಷಣ ರಾಕ್ಷಸ" ಅಂತ! ಇಲ್ಲದಿದ್ದರೆ 'ಕನ್ನಡ ಕುಂಭಕರ್ಣ' ಅಂತ! ಭಾಷಣ ವಿದ್ದಾಗ ಮಾತ್ರ ಅವನಿಗೆ ಎಚ್ಚರ—ಉಳಿದ ಸಮಯ ಗಾಢ ನಿದ್ರೆ!

## ದೃಶ್ಯ ೭.

[ಮೈದಾನು. ಭುಜಂಗರಾಯರು ಭಾಷಣವೇದಿಕೆಯ ಮೇಲೆ, Micro—phone ಮುಂದೆ ನಿಂತಿರುವರು. ಬಳಿಯಲ್ಲಿ ಗೋವಿಂದರಾವ ಸಖಾರಾವ ನಿಂತಿರುವನು. ಭುಜಂಗರಾಯರು ಇಂಗ್ಲಿಷಿನಲ್ಲಿ ಒಂದೊಂದು ಪಂಕ್ತಿಯಂತೆ ಹೇಳುವಾಗ—ಗೋವಿಂದರಾಮನು ಸರಿಯಾದ ಅರ್ಥ ಬರುವಂತೆ ಕನ್ನಡದಲ್ಲಿ ತರ್ಜುಮೆ ಮಾಡುತ್ತಿರುವನು.]

ಭುಜಂಗ: Ladies & Gentlemen!

ಗೋವಿಂದ: ಮಹಿಳೆಯರೇ ಮತ್ತು ಮಹನೀಯರೇ,

ಭು: I speak front of you lucky sick man.

ಗೋ: ನಾನಿಂದು ಅಸ್ವಸ್ಥದ ಮನುಷ್ಯನಾಗಿಯೂ ನಿಮ್ಮ ಮುಂದೆ ನಿಂತು ಭಾಷಣ ಮಾಡುತ್ತಿರುವುದು ನನ್ನ ಸುದೈವವೆಂದೇ ತಿಳಿವೆನು.

ಭು: Today I speak front and tomorrow I speak back. I is honest.

ಗೋ: ನಾನು ಇಂದು ತಮ್ಮ ಮುಂದೆ ಮಾತಾಡುವೆನು— ಹೀಗೆ ಮಾತಾಡಿದಂತೆ ಮತ್ತೆ ಹಿಂದಿನಿಂದಲೂ ಅದರಂತೆ ನಡಕೊಳ್ಳುವೆನು. ನಾನು ಈ ವಿಷಯದಲ್ಲಿ ಪ್ರಾಮಾಣಿಕನಾಗಿರುವೆನು.

ಭು: All people talked you alone stan l election and I stand up.

ಗೋ: ಎಲ್ಲ ಜನರು ನೀವೇ ಚುನಾವಣೆಗೆ ನಿಲ್ಲಬೇಕೆಂದು ಒತ್ತಾಯ ಪಡಿಸಿದರು—ಎಂದೇ ನಾನು ನಿಂತಿರುತ್ತೇನೆ.

(ಸಭೆಯೊಳಗಿಂದ ಒಬ್ಬ: "ಹಾಗಾದರೆ ಸುಮ್ಮನೆ ನಮಗೇಕೆ ತೊಂದರೆ ಕೊಡುತ್ತೀರಿ?")

ಭು: If I passed election I am servicing people.

ಗೋ: ನಾನು ಈ ಚುನಾವಣೆಯಲ್ಲಿ ಗೆದ್ದರೆ, ಜನತಾಸೇವೆಯನ್ನೆ ಮುಖ್ಯ ಉದ್ದೇಶವಾಗಿಟ್ಟುಕೊಳ್ಳುವೆನು.

ಭು: I am not sleeping till peacing people.

ಗೋ: ಜನರಿಗೆ ಪೂರ್ಣಶಾಂತಿ—ಸುಖಗಳು ಲಭಿಸುವವರೆಗೆ ನಾನು ವಿಶ್ರಾಂತಿ ಪಡೆಯುವುದಿಲ್ಲ.

ಭು: All speak five year plan--seven year plan-ten year plan.

ಗೋ: ಎಲ್ಲರೂ ಇಂದು ಪಂಚವಾರ್ಷಿಕ ಯೋಜನೆ--ಸಪ್ತವಾರ್ಷಿಕ ಯೋಜನೆ--ಮತ್ತು ದಶವಾರ್ಷಿಕ ಯೋಜನೆಯ ಕುರಿತು ಮಾತಾಡುತಿದ್ದಾರೆ.

ಭು: I speak monthly plan—weekly plan-hour plan.

ಗೋ: ಜನರು ಇಚ್ಛಿಸಿದರೆ ನಾನು ಮಾಸಿಕ ಯೋಜನೆ--ಸಾಪ್ತಾಹಿಕ ಯೋಜನೆ—ಘಂಟೆ ಘಂಟೆಗೆ ಕೂಡ ಯೋಜನೆ ಮಾಡಬಲ್ಲೆ.

ಭು: I am always plan.

ಗೋ: ನಾನು ಯಾವಾಗಲೂ ಯೋಜಿಸುತ್ತಿರುವ ಮನುಷ್ಯ.

ಭು: Men and Women speak more patients and no hospitals.

ಗೋ: ಈ ದಿನಗಳಲ್ಲಿ ರೋಗಿಗಳು ಹೆಚ್ಚು--ಆಸ್ಪತ್ರೆಗಳು ಕಮ್ಮಿ ಎಂದು ಸ್ತ್ರೀ ಪುರುಷರು ಹೇಳುವರು.

ಭೂ: If I is elect, I give hospital to Women and Men.

ಗೋ: ನಾನು ಚುನಾಯಿಸಿ ಬಂದರೆ, ಸ್ತ್ರೀ--ಪುರುಷರಿಗೆ ಬೇಕಾದಷ್ಟು ಆಸ್ಪತ್ರೆಗಳು ದೊರೆವಂತೆ ಮಾಡುವೆನು.

ಭೂ: I give all houses to hospitals and all hospitals to houses.

ಗೋ: ಅವಶ್ಯ ಬಿದ್ದರೆ, ಮನೆಗಳನ್ನೆ ಆಸ್ಪತ್ರೆಗಳಾಗಿ ಪರಿವರ್ತಿಸುವುದೂ ಸಾಧ್ಯ.

(ಸಭೆಯೊಳಗಿಂದ ಕೂಗು: ನಮಗೆ ಆಸ್ಪತ್ರೆ ಬೇಡ--ಅನ್ನ ಬೇಕು!)

ಭೂ: Education is my speciality.

ಗೋ: ಶಿಕ್ಷಣ ವಿಷಯವು ನನ್ನ ವೈಶಿಷ್ಟ್ಯ.

ಭೂ: I start education in cradle and end in death.

ಗೋ: ಶಿಕ್ಷಣವು ತೊಟ್ಟಿಲಿನಿಂದ ಚಟ್ಟದ ವರೆಗೆ ಕೊಡಲ್ಪಡುವುದು

ಭೂ: Slates and pencils free.

ಗೋ: ಸ್ಲೇಟು--ಪೆನ್ಸಿಲುಗಳನ್ನು ಧರ್ಮಾರ್ಥ ಸಿಗುವಂತೆ ಮಾಡುವೆನು.

ಭೂ: Nowadays we hear teachers weep.

ಗೋ: ಇಂದಿನ ದಿನದಲ್ಲಿ ನಾವು 'ಉಪಾಧ್ಯಾಯರ ಗೋಳು' ಎಂಬುದಾಗಿ ಕೇಳುತ್ತಿರುತ್ತೇವೆ.

ಭೂ: I say to teachers don't weep.

ಗೋ: ಗೋಳಾಡಬೇಡಿರಿ ಎಂದೇ ಉಪಾಧ್ಯಾಯರಲ್ಲಿ ನನ್ನ ವಿನಂತಿ.

ಭೂ: If I is passing election, I make all teachers headmasters.

ಗೋ: ನಾನು ಈ ಚುನಾವಣೆಯಲ್ಲಿ ಗೆದ್ದು ಬಂದರೆ, ಎಲ್ಲ ಉಪಾಧ್ಯಾಯರನ್ನು ಹೆಡ್ಮಾಸ್ತರರೆಂದು ನಾಮಕರಣ ಮಾಡುವೆನು.

ಭೂ: I call their children "little headmasters" and when father died I make them headmasters.

ಗೋ: ಅವರ ಮಕ್ಕಳು ಕೂಡಾ ಬಾಲ ಮಹೋಪಾಧ್ಯಾಯರೆಂದು ಗುರುತಿಸಲ್ಪಟ್ಟು, ಅವರ ತಂದೆಯ ಮರಣಾನಂತರ ಹೆಡ್ಮಾಸ್ಟರರಾಗುವರು.

ಭು: I think all teachers work eighty years.

ಗೋ: ಉಪಾಧ್ಯಾಯರೆಲ್ಲರೂ ಎಂಭತ್ತು ವರ್ಷಗಳ ತನಕ ಸರ್ವಿಸು ಮಾಡಬಹುದೆಂದು ನನ್ನ ಅಭಿಪ್ರಾಯ.

ಭು: When teachers faint in class room chairs I make pension begin.

ಗೋ: ಅವರು, ಕೆಲಸ ಮಾಡಲು ಏನೇನೂ ತ್ರಾಣವಿಲ್ಲದೆ ಕ್ಲಾಸಿನ ಕುರ್ಚಿಗಳಲ್ಲಿ ಮೂರ್ಛೆ ಹೋಗುವ ವರೆಗೆ ಕೆಲಸ ಮಾಡಲು ಅಡ್ಡಿಯಿಲ್ಲ.

ಭು: Pension is equal salary.

ಗೋ: ತಲಬಿನಷ್ಟೆ ಪೆನ್ಶನ್ ಕೊಡಲಾಗುವುದು.

ಭು: I give more midwives.

ಗೋ: ನಾನು ಹೆಚ್ಚೆಚ್ಚು ಸೂಲಗಿತ್ತಿಯರನ್ನು ನೇಮಿಸುತ್ತೇನೆ.

ಭು: "Midwives" name is not good.

ಗೋ: 'ಸೂಲಗಿತ್ತಿ' ಎಂಬ ಹೆಸರು ಚಲೋದಲ್ಲ.

ಭು: I change "midwives" to "goodwives".

ಗೋ: ನಾನು "ಸೂಲಗಿತ್ತಿ" ಎಂಬುದನ್ನು "ಶೀಲವತಿ" ಎಂದು ಬದಲಾಯಿಸುತ್ತೇನೆ.

ಭು: Woman respect is my another speciality.

ಗೋ: ಸ್ತ್ರೀಯರಿಗೆ ಗೌರವ ಕೊಡುವುದು ನನ್ನ ಇನ್ನೊಂದು ವೈಶಿಷ್ಟ್ಯ.

ಭು: I take control.

ಗೋ: ನಾನು ಕಂಟ್ರೋಲುಗಳನ್ನು ತೆಗೆದು ಹಾಕುತ್ತೇನೆ.

ಭು: If price up I cannot control.

ಗೋ: ಧಾರಣೆ ಏರಿದರೂ ಕಂಟ್ರೋಲು ಇಲ್ಲ.

ಭು: If price very up–I import rice.

ಗೋ: ಆದರೆ, ಅತಿಯಾಗಿ ಧಾರಣೆ ಏರಿದರೆ, ಸಾಕಾದಷ್ಟು ಅಕ್ಕಿಯನ್ನು ಆಮದು ಮಾಡುತ್ತೇನೆ.

ಭು: Then price little–people happy.

ಗೋ: ಆಗ ಧಾರಣೆ ಇಳಿಯುತ್ತದೆ-ಜನರೆಲ್ಲ ಸಂತೋಷ ಪಡುತ್ತಾರೆ.

ಭು: I dam everywhere.

ಗೋ: ನಾನು ಎಲ್ಲ ಕಡೆಗಳಲ್ಲೂ ಅಣೆಕಟ್ಟು ಹಾಕಿಸುತ್ತೇನೆ.

ಭು: Each dam full of water—

ಗೋ: ಪ್ರತಿ ಅಣೆಕಟ್ಟಿನಲ್ಲಿ ಧಾರಾಳ ನೀರು.

ಭು: I make bridges.

ಗೋ: ನಾನು ಸಂಕಗಳನ್ನು ಕಟ್ಟಿಸುತ್ತೇನೆ.

ಭು: All bridges very strong—no 'weak bridge" board.

ಗೋ: ಎಲ್ಲ ಸಂಕಗಳು ಗಟ್ಟಿಮುಟ್ಟಾಗಿರುವಂತೆ ಮಾಡುತ್ತೇನೆ. "ಬಲವಿಲ್ಲದ ಸಂಕ" ಎಂಬ ಬೋರ್ಡ್ ಇಲ್ಲ!

ಸಭೆಯೊಳಗಿಂದ ಗೇಂದು: "ಏ ಬಾಯಿಬಡಕಾ, ನೀನು ಈ ಮೊದಲು ಎಷ್ಟು ದೇಶ ಸೇವೆ ಮಾಡಿರುತ್ತಿ ಅಂತ ಹೇಳು".

ಭುಜಂಗ: What?

[ಗೇಂದು, ಗೋಪು ಕೂಡಿ ಕೂಗಾಡಿ ಗಲಭೆಯೆಬ್ಬಿಸುವರು. ಸಭೆ ಬರಖಾಸ್ತಾಗುವುದು.]

## ದೃಶ್ಯ ೮.

[ಭುಜಂಗರಾಯರ ಮನೆ ಕೋಣೆ. ಭುಜಂಗರಾಯರು ಕಳವಳದಿಂದ ಅತ್ತಿತ್ತ ನಡೆಯುತ್ತಿರುವರು. ರಾಮಪ್ಪಯ್ಯ ಮತ್ತು ವಿಠ್ಠಲಪಂತರ ಪ್ರವೇಶ.]

ಭುಜಂಗ: (ಆತುರದಿಂದ) ರಾಮಪ್ಪಯ್ಯ! (ಕುಳಿತುಕೊಳ್ಳಲು ಕೈಯಿಂದಲೇ ಸನ್ನೆಮಾಡುತ್ತ ಅವರ ಮುಖಭಾವ ನೋಡುವನು. ಅವರು ಕುಳಿತುಕೊಳ್ಳೋದಿಲ್ಲ.)

ರಾಮಪ್ಪಯ್ಯ: (ದುಃಖದ ಮುಖ ಮಾಡಿ, ಪಂತರ ಕಡೆ ತಿರುಗಿ) ಪಂತರೇ ನೀವೇ ಹೇಳಿ!

ವಿಠ್ಠಲ ಪಂತ: ನೀವೇ ಹೇಳಿ, ನೀವೇ ಹೇಳಿ!

ಭುಜಂಗ: (ಗಾಬರಿಯಿಂದ) ಏನು--ಸಂಕೋಚ? ಮತ ಎಣಿಕೆ ಮಾಡಿ ಆಯಿತೇ?

ರಾಮುಪ್ಪಯ್ಯ: ಅಹುದು ಸ್ವಾಮಿ!

ಭುಜಂಗ: ಹಾಗಾದರೆ ಕುಳಿತುಕೊಂಡು ಮಾತಾಡೋಣ. ನನಗೆ ಸಂತೋಷವಾದರೂ ಒರಗಬೇಕು, ದುಃಖವಾದರೂ ಒರಗಬೇಕು. ಒಟ್ಟಾರೆ ನಾನು ಒರಗುವ ಮನುಷ್ಯ!................(ಕುಳಿತುಕೊಂಡು) ಇನ್ನು ಹೇಳಿ,—ಯಾರಿಗೆ ಎಷ್ಟು?

ರಾಮುಪ್ಪಯ್ಯ: ಪಂತರೇ, ನಿಮಗೆ ಗೊತ್ತಿದೆ, ಹೇಳಿ.

ವಿಠ್ಠಲ ಪಂತ: ನಿಮಗೂ ಗೊತ್ತಿದೆ; ನೀವೇ ಹೇಳಿ.

ರಾಮುಪ್ಪಯ್ಯ: ನಾನು ಹೇಳಿದರೂ ನೀವೂ ಹೇಳಿದರೂ ಸಂಖೆ ಅದಲುಬದಲಾಗುವುದಿಲ್ಲವಷ್ಟೆ. ಹೇಳಿ!

ವಿಠ್ಠಲ ಪಂತ: ಹಾಗಿದ್ದರೆ ನೀವೇ ಹೇಳಿದರೆ ದೋಷವಿಲ್ಲ.

ರಾಮುಪ್ಪಯ್ಯ: ಭುಜಂಗ ರಾಯರೇ!

ಭುಜಂಗ: (ಆತುರದಿಂದ ದೈನ್ಯದಿಂದ ತಲೆ ಎತ್ತುವರು)

ರಾಮುಪ್ಪಯ್ಯ: ಮೀನಾಕ್ಷಮ್ಮನಿಗೆ........ಓಟೇ ಓಟು.

ಭುಜಂಗ: ನೀರೂ, ನೀರೂ!

ರಾಮುಪ್ಪಯ್ಯ: ಶಂಕ್ರಯ್ಯನವರಿಗೆ ಒಂದು!

ಭುಜಂಗ: ಬೇಗ ತಾರಪ್ಪ, ನೀರು! ಒಂದು ಕಪ್ ನೀರು!

(ಅಡುಗೆಯುವನು ನೀರು ತರುವನು. ಭುಜಂಗರಾಯರು ಅದನ್ನು ಪುನಃ ಅವನ ಕೈಗೆ ಕೊಟ್ಟು)—

ಏ ಚರಂಡಿ ಮಗನೇ! ನೀರೇಕೆ ತಂದಿ? ಕಾಫಿ ತಾ! ಇಷ್ಟು ದಪ್ಪ ಕಾಫಿ ತಾ—ಹೋಗು! ಏ! (ಅಡುಗೆಯುವನು ಹೋಗುವನು.)

ರಾಮುಪ್ಪಯ್ಯ: ಮತ್ತೆ ನಿಮಗೆ....(ಸುಮ್ಮನಾಗುವನು.)

ಭುಜಂಗ: ಹೇಳಿರಪ್ಪಾ, ನನಗೆ....ಹೇಳಿಬಿಡಿ.

ವಿಠ್ಠಲ ಪಂತ: ತಮಗೆ....ತಮಗೆ....ಹೇಳಿ ರಾಮುಪ್ಪಯ್ಯನವರೇ!

ರಾಮುಪ್ಪಯ್ಯ: ನೀವೇ ಹೇಳಿ!

ವಿಠ್ಠಲ ಪಂತ: ನೀವೇ! ನೀವೇ!

ಭುಜಂಗ: ಹೇ ಪಂತರೇ! ಹಾಗೆ ನನ್ನ ಎದೆ ಮೇಲೆ ಫೂಟ್‌ಬಾಲ್ ಆಡಬೇಡಿ! ಆಡಬೇಕಾದರೆ ಮೈದಾನಿಗೆ ಹೋಗಿ ಆಡಿ! ಹೆಣ್ಣೋ ಗಂಡೋ ಅಂತ ಹೇಳಿಬಿಡಿ ಒಮ್ಮೆ!

ವಿಠಲ ಪಂತ: ಭುಜಂಗರಾಯರೇ, ಮೀನಾಕ್ಷಮ್ಮ ಗೆದ್ದಳು.

ಭುಜಂಗ: ಹ್ಞಾ! (Stupor ನಿಂದ ನೋಡುವನು)

ರಾಮಪ್ಪಯ್ಯ: (ಗಾಬರಿಯಿಂದ) ಭುಜಂಗರಾಯರೇ!

(ಲಕ್ಷ್ಮಿ ಬರುವಳು)

ವಿಠ್ಠಲ ಪಂತ: ನಾವು, ಫಲಿತಾಂಶ ಹೇಳಲು ಬಂದಿದ್ದೆವು.

ಭುಜಂಗ: ಹೇಳಿಯಾಯಿತಲ್ಲ. ಇನ್ನೇನು?

ರಾಮಪ್ಪಯ್ಯ: ಸೋಲನ್ನು ತಾವು ಮನಸ್ಸಿಗೆ ಹಚ್ಚಿಕೊಳ್ಳಬಾರದೆಂದು ನಮ್ಮ ವಿನಂತಿ.

ಭುಜಂಗ: ಇಲ್ಲ, ಇಕೊಳ್ಳಿ (ತನ್ನ ಹಣೆಯನ್ನು ಸವರಿ ಬಿಸುಡಿದಂತೆ ಮಾಡಿ) ಮುಗಿಯಿತಲ್ಲ!

ವಿಠ್ಠಲ ಪಂತ: ತಮಗೆ ಶ್ರಮವೂ ಆಯಿತು, ಕಾಲವ್ಯಯವೂ ಆಯಿತು, ಧನವ್ಯಯವೂ ಆಯಿತು.

ಭುಜಂಗ: ಛೇ, ಅದೇನೂ ದೊಡ್ಡದಲ್ಲ. ಭಸಕ್ಕನೆ ಇಪ್ಪತ್ತು ಸಾವಿರ ರೂಪಾಯಿಯೂ ಹೋಯಿತು—ಫಕ್ಕನೆ ಎಪ್ಪತ್ತು ವರ್ಷ ವಯಸ್ಸಾದ ಹಾಗೂ ಆಯಿತು. ನಷ್ಟವೇನೂ ಇಲ್ಲ—ವಿಠ್ಠಲ ಪಟಂಗರೇ!

ವಿಠ್ಠಲ ಪಂತ: 'ಕರ್ಮಣ್ಯೇವಾಧಿಕಾರಸ್ತೇ ಮಾಫಲೇಶು ಕದಾಚನ' ಅಂತ!

ಭುಜಂಗ: ಅದನ್ನು ಕೃಷ್ಣನು ಅರ್ಜುನನಿಗೆ ಕುರುಕ್ಷೇತ್ರದಲ್ಲಿ ಹೇಳಿದನು. ನೀವು ಕೃಷ್ಣನಲ್ಲ. ನಾನು ಅರ್ಜುನನಲ್ಲ.

ರಾಮಪ್ಪಯ್ಯ: ತಾವು ವಿಶ್ರಾಂತಿ............

ಭುಜಂಗ: ಗಾಬರಿಯಿಲ್ಲ ನರಿಯಪ್ಪನವರೇ! ನಾನು ಸಾಬೂತಾಗಿದ್ದೇನೆ, ಏನೂ!

ರಾಮಪ್ಪಯ್ಯ: ಪುನಃ ವಿನಂತಿಸುತ್ತೇನೆ—ಸೋಲನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ನಾಡದು ಮುನಿಸಿಪಲ್ ಚುನಾವಣೆ ಇದೆ.

ಭುಜಂಗ: (ಫಕ್ಕನೆ ಕೋಪದಿಂದ) Shut up! ಚುನಾವಣೆಯ ಮಾತೆತ್ತಿದರೆ ಜೋಕೆ! ಮನುಷ್ಯ ಶತ್ರು! ಶಾಂತಿಯ ವೈರಿ! ಮುನಿಸಿಪಲ್ ಚುನಾವಣೆಗೆ ಇನ್ನೊಂದು ಕುರಿಯನ್ನು ಹುಡುಕಿ ಹೋಗು! ನಡೆ!

ವಿಠ್ಠಲ ಪಂತ: ಬನ್ನಿ ರಾಮಪ್ಪಯ್ಯನವರೇ! ನನ್ನನ್ನು ಘಟಿಂಗ ಅಂದರು-ನಿಮ್ಮನ್ನು ನರಿ ಎಂದರು! ಇವರಿಗೆ ಉಪಕಾರವಿಲ್ಲ. 'ಮೂರ್ಖಸ್ಯ ನಾಸ್ತ್ಯೌಷಧಂ' ಅಂತ!

ರಾಮಪ್ಪಯ್ಯ: ನಾವು ದಣಿದುದಕ್ಕೆ ನಮಗೆ ಪ್ರತಿಫಲ ಇದು! ಇಂಥವರಿಗೆ ಓಟುಸಿಕ್ಕಿದರೆ ಊರಿನ ಗತಿ ಏನಾಗುತ್ತಿತ್ತೊ!

ಲಕ್ಷ್ಮಿ: ಸಾಕುಮಾಡಿ ರಾಮಪ್ಪಯ್ಯನವರೇ! ನಿಮಗೆ ಈ ತರ ಮಾತಾಡಲು ನಾಚಿಕೆಯಾಗುವುದಿಲ್ಲವೆ? ಓತಿಯ ಹಾಗೆ ಬಣ್ಣ ಬದಲಾಯಿಸುವ ನಿಮ್ಮಂಥ ವಂಚಕರು ಪುಣ್ಯಕ್ಕೆ ಊರಿನಲ್ಲಿ ಹೆಚ್ಚಿಲ್ಲ.

ಭುಜಂಗ: ವಂಚಕರು? ಲಕ್ಷ್ಮಿ, ನಿನಗೆ ತಿಳಿದಿಲ್ಲ. ಇವರಿಗೆ Germs ಅನ್ನುತ್ತಾರೆ. ರೋಗಾಣುಗಳು ಅಂತ! ಇವರು ಹೋದಲ್ಲೆಲ್ಲ ಜ್ವರ ಬರುತ್ತದೆ!............ಹೋಗಿರಿ ಸ್ವಾಮಿ, ದಯಮಾಡಿ! ನನ್ನ ಸ್ಥಾನ ಎಸೆಂಬ್ಲಿಯಲ್ಲ—ನಿಮ್ಮ ಸ್ಥಾನ ಈ ಮನೆಯಲ್ಲ! ಇಲ್ಲಿ ನಾನು ಮತ್ತು ಲಕ್ಷ್ಮಿ ಮಾತ್ರ ಇರೋದು!

(ರಾಮಪ್ಪಯ್ಯ, ವಿಠ್ಠಲ ಪಂತ ಹೋಗುವರು.)

ಭುಜಂಗ: ಲಕ್ಷ್ಮಿ, ನೀನು ಆ ದಿನ ಹೇಳಿದ್ದು ನಿಜ. ನಾನು ನಕ್ಷತ್ರವಾಗಿಯೇ ಇರಲು ಇಚ್ಛಿಸಬೇಕಿತ್ತು. ಆದರೆ, ಸೂರ್ಯನಾಗಲು ಹೋಗಿ ಮೈಸುಟ್ಟುಕೊಂಡೆ.

ಲಕ್ಷ್ಮಿ: ಮತ್ತೆ ಹೆಂಗಸರಿಗೆ ತಲೆಯಿಲ್ಲವೆನ್ನುವುದೂ ಜಾಸ್ತಿ!

ಭುಜಂಗ: ಮೀನಾಕ್ಷಿ ಗೆದ್ದ ಮೇಲೆ, ಇನ್ನು ಹಾಗೆ ಹೇಳಲು ಬಂದಿತೇ? ಲಕ್ಷ್ಮೀ, ಈ ಚುನಾವಣೆಯಲ್ಲಿ ಹಣ ಮಾತ್ರವಲ್ಲ, ಗುಣವೂ ಹೋಗಿ ಬಿಡುತ್ತದೆ.

ಲಕ್ಷ್ಮಿ: ಹೇಗಂದಿರಿ?

ಭುಜಂಗ; ನೋಡು. ಸಹಜವಾಗಿ ಮನುಷ್ಯನು ಯಾವಾಗಲೂ ತಾನು ಯಾರು ಎಂದು ವಿವರಿಸಲು ಹೋಗುವುದಿಲ್ಲ. ಚುನಾವಣೆಗೆ ನಿಂತರೆ, ಪ್ರತಿಸ್ಪರ್ಧಿಗಳು ಇದ್ದರೆ, ಅವನಿಗೆ ಕ್ಷೌರಕ್ಕೆ ಕೂತಾಗ ಸೀನು ಬಂದ ಗತಿಯಾಗುತ್ತದೆ. ಮುಖಕ್ಕೆಲ್ಲ ಗಾಯಮಾಡಿಕೊಂಡು ತಮಾಷೆಯಾಗಿ ಕಾಣುತ್ತಾನೆ. ತಾನು ಯಾರು, ತನ್ನ ಸಾಮರ್ಥ್ಯವೆಷ್ಟು, ತನ್ನನ್ನೆ

ಏಕೆ ಚುನಾಯಿಸಬೇಕು, ಎಂದು ಸ್ವಪ್ರಶಂಸೆಗೆ ತೊಡಗುತ್ತಾನೆ. ಅತಿ ವರ್ಣನೆಗೆ ಹೇಸುವುದಿಲ್ಲ. ತನ್ನಿಂದಾಗದ್ದನ್ನೆಲ್ಲ ಜನರಿಗೆ ಭಾಷೆ ಕೊಡುತ್ತಾನೆ.

ಲಕ್ಷ್ಮಿ: ಅದು ಅಪ್ರಾಮಾಣಿಕರ ವಿಷಯವಾಯಿತು. ಪ್ರಾಮಾಣಿಕರು ಭಾಷೆ ಕೊಡಲಾರರು. ಕೊಟ್ಟರೆ, ಅದನ್ನು ಸಾಧಿಸುವರು.

ಭುಜಂಗ: ಲಕ್ಷ್ಮಿ, ಪ್ರಾಮಾಣಿಕರಾರು ಅಪ್ರಾಮಾಣಿಕರಾರು ಎಂದು ಗುರುತು ಹಚ್ಚೋದೇ ಕಷ್ಟವಾಗಿದೆ. ಒಂದು ಬುಟ್ಟಿ ಮೀನುಗಳಲ್ಲಿ ಆ ಮೀನು—ಈ ಮೀನು ಎಂದು ಗುರುತಿಸುವುದುಂಟೆ?

ಲಕ್ಷ್ಮಿ: ಒಂದು ಚುನಾವಣೆಯಿಂದ ನೀವು ಇಷ್ಟೊಂದು ಜನದ್ವೇಷಿಯಾಗಿ, ಸಂಸಾರ ವಿದ್ಯಮಾನಗಳಿಗೆ ವಿರಕ್ತರಾಗಿರುವಂತೆ ತೋರುತ್ತದೆ.

ಭುಜಂಗ: ಅಷ್ಟಾಗಿ—ಜೀವದಿಂದುಳಿದುದು ನಿನ್ನ ಭಾಗ್ಯವೆನ್ನು. ಚುನಾವಣೆ ಮುಗಿಯಬೇಕಾದರೆ, ತಾಳೆಮರದಂತಹ ಮನುಷ್ಯನು ಒಂದು ಮೊಳದಷ್ಟು ಚಿಕ್ಕವನಾಗುತ್ತಾನೆ.

ಸಂಪೂರ್ಣ

---

ಂದಾಣೆ ಮಾಲೆ ಎಲ್ಲರಿಗಾಗಿ ಇದೆ

## ಒಂದಾಣೆ ಮಾಲೆಯ ಏಳನೇ ಪ್ರಕಟಣೆ

## ದಿ| ಎಮ್. ಎನ್. ಕಾಮತರವರ

## ಮೂರು ವಿನೋದಕಥೆಗಳು

. ಬೀಡಿ ಸೇದಬೇಡಿ. ೨. ಡಾಕ್ಟರರ ವಿಝಿಟ್.

೩. ಆ ಮಗು.

ಬರುವ ವಾರ ಪ್ರಕಟವಾಗುವುದು.

ಂದಾಣೆ ಮಾಲೆಯಲ್ಲಿ—(೧) ಯಾವ ಕಾಲಕ್ಕೂ ಹದಿನಾರು ಪುಟಗಳಿಗಿಂತ ಕಡಿಮೆಯ ಪುಸ್ತಕವಿರುವುದಿಲ್ಲ. (೨) ಪುಟ ಸಂಖ್ಯೆ 24, 32, 40 ಅಥವಾ 48 ಇದ್ದರೂ ಬೆಲೆ ಒಂದೇ ಆಣೆ. (೩) ಉತ್ತಮ ವರ್ಗದ ಸಣ್ಣ ಕತೆಗಳು, ಏಕಾಂಕ ಪ್ರಹಸನಗಳು ಚಿಕ್ಕ ನಿಘಂಟು (ಅರ್ಥಕೋಶ)ಗಳು, ವ್ಯಕ್ತಿ ಚಿತ್ರಗಳು, ಕ್ಷೇತ್ರಗಳ ಪರಿಚಯ, ದೇಶವಿದೇಶಗಳ ಚರಿತ್ರಗಳು, ಗೃಹವೈದ್ಯ, ಸೃಷ್ಟಿಯ ವೈಚಿತ್ರ್ಯಗಳು, ಜಗತ್ತಿನ ಶ್ರೇಷ್ಠ ತತ್ತ್ವಜ್ಞಾನಿಗಳ ಉಪದೇಶಗಳು—ಹೀಗೆ ನೂರಾರು ವಿಷಯಗಳು ಈ ಮಾಲೆಯಲ್ಲಿ ಪ್ರಕಟವಾಗುವುವು.

ಂದಾಣೆ ಮಾಲೆಯ ಪುಸ್ತಕಗಳನ್ನು, ಸ್ತ್ರೀಯರಾಗಲಿ ಪುರುಷರಾಗಲಿ, ವಿವಾಹವಯಸ್ಕರಾಗಲಿ, ವಿದ್ಯಾರ್ಥಿಗಳಾಗಲಿ ಓದಲು ಯಾವ ಆತಂಕವೂ ಇರದಂತೆ, ಜಾಗರೂಕತೆಯಿಂದ ವಿಷಯಗಳನ್ನಾರಿಸಿಯೇ ಪ್ರಕಟಿಸಲಾಗುವುದು.

ಪ್ರತಿಗಳನ್ನು ಆಯಾ ಊರಿನ ಪುಸ್ತಕ ವ್ಯಾಪಾರಿಗಳಿಂದ ಅಥವಾ ನ್ಯೂಸ್ ಏಜಂಟರಿಂದ ಪಡೆಯಬಹುದು.

ಅಥವಾ

ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು.

ರಿಗೆ ಬೇಕಾದುದು ಒಂದಾಣೆ ಮಾಲೆಯಲ್ಲಿದೆ.

Edited, Printed and Publis[...]y K. V. Shenoy
at The Prabhat Printers [...] Mangalore-1.